

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*



Vol-14 | August - 2017 | Issue No. 08 | ₹ 10/-


## ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಪರವಾಗಿ ಸಮಸ್ತರಿಗೆ ಗೌರಿ-ಗಣೇಶ ಮತ್ತು ಬಕ್ರೀದ್ ಹಬ್ಬದ ಶುಭಾಶಯಗಳು





ಆಗಸ್ಟ್ 15ರಂದು ಬೆಂಗಳೂರಿನ ಮಾಣೆಕ್ ಷಾ ಕವಾಯುತ್ ಮೈದಾನದಲ್ಲಿ ನಡೆದ 71ನೇ ಸ್ವಾತಂತ್ರ್ಯೋತ್ಸವ ದಿನಾಚರಣೆ ಸಮಾರಂಭದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯನವರು ಧ್ವಜಾರೋಹಣ ನೆರವೇರಿಸಿದರು. ಇದೇ ಸಂದರ್ಭದಲ್ಲಿ ಸ್ಕೌಟ್ಸ್-ಗೈಡ್ಸ್ ತಂಡಗಳು ಪಥಸಂಚಲನದಲ್ಲಿ ಭಾಗವಹಿಸಿ ಉತ್ತಮ ಪ್ರದರ್ಶನ ನೀಡಿದರು.





ಮಾಣೆಕ್ ಷಾ ಕವಾಯತ್ ಮೈದಾನದಲ್ಲಿ ಪಥಸಂಚಲನದಲ್ಲಿ ಭಾಗವಹಿಸುವ ವಿವಿಧ ಜಿಲ್ಲೆಗಳ ಸ್ಕೌಟ್ಸ್-ಗೈಡ್ಸ್‌ಗಳಿಗೆ ರಾಜ್ಯ ಕೇಂದ್ರ ಕಛೇರಿ ಶಾಂತಿಗೃಹದಲ್ಲಿ ಆಗಸ್ಟ್ 08 ರಿಂದ 15ರ ವರೆಗೆ. ಏರ್ಪಡಿಸಿದ್ದ ತರಬೇತಿ ಶಿಬಿರದಲ್ಲಿ ಪಾಲ್ಗೊಂಡಿದ್ದ ಸ್ಕೌಟ್ಸ್-ಗೈಡ್ಸ್‌ಗಳಿಂದ ಗೌರವ ವಂದನೆ ಸ್ವೀಕರಿಸುತ್ತಿರುವ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು




ಆಗಸ್ಟ್ 16ರಂದು ಬೆಂಗಳೂರಿನ ಶಾಂತಿಗೃಹದಲ್ಲಿ ಜರುಗಿದ ದಿ. ವಿ.ಪಿ. ದೀನದಯಳು ನಾಯ್ಡು ಅವರ ಜನ್ಮಶತಮಾನೋತ್ಸವ ಕಾರ್ಯಕ್ರಮವನ್ನು ಶ್ರೀ ಯು.ಟಿ. ಖಾದರ್, ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಸಚಿವರು ಉದ್ಘಾಟಿಸಿದರು. ಚಿತ್ರದಲ್ಲಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಸಹಾಯಕ ರಾಜ್ಯ ಆಯುಕ್ತರುಗಳಾದ ಶ್ರೀ ಡಿ. ವೆಂಕಟೇಶ್, ಶ್ರೀಮತಿ ಬಿ.ವಿ. ರಾಮಲತಾ, ಶ್ರೀ ಕೆ. ನರಸಿಂಹಮೂರ್ತಿ, ಶ್ರೀ ಎಂ.ಎ. ಚೆಲ್ಲಯ್ಯ, ಪಿ.ಆರ್.ಓ., ಶ್ರೀಮತಿ ರಾಮರತ್ನ ಹಾಗೂ ದಿ. ವಿ. ಪಿ. ದೀನದಯಾಳು ನಾಯ್ಡು ಅವರ ಪುತ್ರಿ ಶ್ರೀಮತಿ ಮೀರ ಹರಿನಾಥ್ ಹಾಗೂ ಮೊಮ್ಮಕ್ಕಳಾದ ಶ್ರೀ ಜೈವಂತ್ ಕಮಲಾಕರ್, ಕು. ನಂದಿನಿ ಕಮಲಾಕರ್ ಇದ್ದಾರೆ.




ಆಗಸ್ಟ್ 22ರಂದು ಮಂಗಳೂರು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಏರ್ಪಡಿಸಿದ್ದ ಡಿಸೆಂಬರ್ 17 ರಿಂದ 23ರ ವರೆಗೆ ಮಂಗಳೂರು ನಗರದಲ್ಲಿ ಆಯೋಜಿಸಿರುವ "28ನೇ ರಾಜ್ಯ ಜಾಂಬೋರೇಟ್" ಬಗ್ಗೆ ಚರ್ಚಿಸಲು ಜರುಗಿದ ಪೂರ್ವಬಾವಿ ಸಭೆಯು ರಾಜ್ಯದ ಅರಣ್ಯ ಮತ್ತು ಪರಿಸರ ಇಲಾಖೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರಾದ ಸನ್ಮಾನ್ಯ ಶ್ರೀ ಬಿ. ರಮಾನಾಥರೈ ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಚಿತ್ರದಲ್ಲಿ ಮಾಜಿ ಸಚಿವರು ಹಾಗು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಮಾನ್ಯ ಶಾಸಕರಾದ ಶ್ರೀ ಜೆ. ಆರ್. ಲೋಬೊ, ಮಂಗಳೂರು ಮಹಾಪೌರರಾದ ಶ್ರೀಮತಿ ಕವಿತಾ ಸುನಿಲ್, ಜಿಲ್ಲಾಧಿಕಾರಿ ಡಾ. ಜಿ.ಕೆ. ಜಗದೀಶ್, ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ ಶ್ರೀ ಸುಧೀರ್ ಕುಮಾರ್ ರೆಡ್ಡಿ, ಹೆಚ್ಚುವರಿ ಜಿಲ್ಲಾಧಿಕಾರಿ ಶ್ರೀ ಕುಮಾರ್ ಇದ್ದಾರೆ.

ಮಂಗಳೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಡಾ. ಎಂ.ಆರ್. ರವಿ ಅವರನ್ನು ಆಗಸ್ಟ್ 22ರಂದು ಬೇಟಿಮಾಡಿ ಸ್ಕೌಟ್-ಗೈಡ್ ಚಳವಳಿ ಅಭಿವೃದ್ಧಿ ಬಗ್ಗೆ ಚರ್ಚಿಸುತ್ತಿರುವ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯಾ, ರಾಜ್ಯ ಸಂಸ್ಥೆ ಉಪಾಧ್ಯಕ್ಷ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎನ್.ಜಿ. ಮೋಹನ್, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ರಾಮಶೇಷ ಶೆಟ್ಟಿ, ರಾಜ್ಯ ಸ್ಕೌಟ್ ಸಂಘಟನಾ ಆಯುಕ್ತ ಶ್ರೀ ಎಂ. ಪ್ರಭಾಕರ್ ಭಟ್ ಚಿತ್ರದಲ್ಲಿದ್ದಾರೆ.



# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

## ಸಂಪಾದಕ ಮಂಡಳಿ



## ಪರಿವಿಡಿ




ಸಂಚಿಕೆಯ ವಾರ್ಷಿಕ ಚಂದಾ ರೂ. 100 / –
ವಿದ್ಯಾಸಂಸ್ಥೆ ಹಾಗೂ ಸಂಘ–ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ. 100 / – ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39
ಅರಮನೆ ರಸ್ತೆ, ಬೆಂಗಳೂರು–560 001
ಇಲ್ಲಿಗೆ ಕಳುಹಿಸಲು ಕೋರಿದೆ.
ದೂ: 080–2226 0017, 2226 7470

ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org

ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scouts-Guides Karnataka






# ರಾಜ್ಯ ಮುಖ್ಯ ಆಯುಕ್ತರ ನುಡಿ

ಪ್ರಿಯ ಓದುಗ ಬಂಧುಗಳೇ

ಸಸ್ನೇಹ ನಮಸ್ಕಾರಗಳು

ನೀವೆಲ್ಲರೂ ಭಾರತದ ಎಪ್ಪತ್ತೊಂದನೆಯ ಸ್ವಾತಂತ್ರ್ಯ ದಿನಾಚರಣೆಯನ್ನು ಅರ್ಥಪೂರ್ಣವಾಗಿ ಆಚರಿಸಿದ್ದೀರಿ. ಜಿಲ್ಲೆ, ತಾಲ್ಲೂಕು ಮತ್ತು ಸ್ಥಳೀಯ ಘಟಕಗಳು ಧ್ವಜಾರೋಹಣ, ವಿವಿಧ ಸಾಂಸ್ಕೃತಿಕ ಚಟುವಟಿಕೆಗಳು ಮತ್ತು ಸ್ಪರ್ಧೆಗಳನ್ನು ಯಶಸ್ವಿಯಾಗಿ ನಡೆಸಿರುವ ಮಾಹಿತಿ ನನಗೆ ಸಂತೋಷವನ್ನುಂಟುಮಾಡಿದೆ. ಜಿಲ್ಲಾ ಮಟ್ಟದ ಧ್ವಜಾರೋಹಣದ ಕಾರ್ಯಕ್ರಮಗಳಲ್ಲಿ ಉತ್ತಮವಾಗಿ ಪಥಚಲನ ನಡೆಸಿ ಕೆಲವು ತಂಡಗಳು ಪ್ರಶಸ್ತಿ ಫಲಕಗಳನ್ನು ಗಳಿಸಿರುವುದು ಹೆಮ್ಮೆಯ ವಿಷಯ.

ಈ ಬಾರಿ ರಾಜ್ಯ ಮಟ್ಟದಲ್ಲಿ ಸ್ವಾತಂತ್ರ್ಯ ದಿನಾಚರಣೆಯ ಸಂದರ್ಭದಲ್ಲಿ ಅತ್ಯುತ್ತಮವಾಗಿ ಪಥಚಲನ ಮಾಡಬೇಕೆಂಬ ಉದ್ದೇಶದಿಂದ ರಾಜ್ಯ ಕೇಂದ್ರ ಕಾರ್ಯಾಲಯ, ಶಾಂತಿಗೃಹ, ಬೆಂಗಳೂರಿನಲ್ಲಿ ಒಂದು ವಿಶೇಷ ಶಿಬಿರವನ್ನು ಆಗಸ್ಟ್ 08 ರಿಂದ 15ರವರೆಗೆ ಏರ್ಪಡಿಸಿತ್ತು. ವಿವಿದ ಜಿಲ್ಲೆಗಳ ತೊಂಬತ್ತು ಶಿಬಿರಾರ್ಥಿಗಳು ಭಾಗವಹಿಸಿದ್ದರು. ಇವರಲ್ಲಿ ಆಯ್ದ 15 ಸ್ಕೌಟ್ಸ್ – 15 ಗೈಡ್ಸ್‌ಗಳು ಮಾಣಿಕ್‌ಷಾ ಪೆರೇಡ್ ಗ್ರೌಂಡ್ಸ್‌ನಲ್ಲಿ ನಡೆದ ಸ್ವಾತಂತ್ರ್ಯೋತ್ಸವದ ಪಥಸಂಚಲನದಲ್ಲಿ ಭಾಗವಹಿಸಿ ಉತ್ತಮ ಪ್ರದರ್ಶನ ನೀಡಿದ್ದಕ್ಕಾಗಿ ಸ್ಕೌಟ್ಸ್–ಗೈಡ್ಸ್‌ಗಳನ್ನು ಹಾಗು ತರಬೇತುದಾರರನ್ನು ನಾನು ಹೃತ್ಪೂರ್ವಕವಾಗಿ ಅಭಿನಂಧಿಸುತ್ತೇನೆ.



ಈ ಬಾರಿಯ ಸ್ವಾತಂತ್ರ್ಯೋತ್ಸವದ ವಿಶೇಷವೆಂದರೆ, ನಮ್ಮ ದೇಶದ ನೂತನ 14ನೇ ರಾಷ್ಟ್ರಪತಿ ಶ್ರೀ ರಾಮನಾಥ್ ಕೋವಿಂದ್‌ರವರು ದೇಶವನ್ನುದ್ದೇಶಿಸಿ ಅವರು ಮಾತನಾಡುತ್ತಾ "ನಾಗರೀಕರು ಮತ್ತು ಸರ್ಕಾರದ ಪಾಲುಗಾರಿಕೆಯು ದೇಶದ ಬೆಳವಣಿಗೆಗೆ ಪ್ರಮುಖಕಾರಣ", ವೆಂದು ನುಡಿದು, "ಸರ್ಕಾರವು ಕಾನೂನು ಮತ್ತು ನಿಯಮಗಳನ್ನು ರೂಪಿಸಬಹುದು, ಆದರೆ ಪ್ರತಿಯೊಬ್ಬ ನಾಗರೀಕರೂ ಅದನ್ನು ಅನುಸರಿಸಬೇಕು. ಸಾಮೂಹಿಕವಾಗಿ ಯೋಜನೆಗಳನ್ನು ಯಶಸ್ವಿಗೊಳಿಸಲು ಪ್ರಯತ್ನಿಸಬೇಕು" ಎಂದು ಅಭಿಪ್ರಾಯಪಟ್ಟರು. "ನಮ್ಮ ಮತ್ತು ನಮ್ಮ ಕುಟುಂಬದ ಬಗ್ಗೆ ಚಿಂತಿಸುವುದು ಸಹಜ, ಆದರೆ ನಿಸ್ವಾರ್ಥದಿಂದ ದೇಶದ ಬಗ್ಗೆ ಚಿಂತಿಸಬೇಕು" ಎಂದು ಕರೆಕೊಟ್ಟ ರಾಷ್ಟ್ರಪತಿಯವರು 2022ಕ್ಕೆ ದೇಶವು ಸ್ವಾತಂತ್ರ್ಯದ 75 ವರ್ಷಗಳನ್ನು ಮುಗಿಸಲಿದೆ. ಅದೊಂದು ಮೈಲಿಗಲ್ಲು" ಎಂದು ನುಡಿದರು.



ಜುಲೈ 25ರಂದು ನಿವೃತ್ತರಾದ ಭಾರತದ 13ನೆಯ ರಾಷ್ಟ್ರಪತಿ ಶ್ರೀ ಪ್ರಣಬ್ ಮುಖರ್ಜಿಯವರು, ನಮ್ಮ ಸಂಸ್ಥೆಯ ಬಗ್ಗೆ ಅಪಾರ ಕಾಳಜಿಯನ್ನು ಹೊಂದಿದ್ದರು. ಕಳೆದ ವರ್ಷ ಮೈಸೂರಿನಲ್ಲಿ ಜರುಗಿದ 17ನೇ ರಾಷ್ಟ್ರೀಯ ಜಾಂಬೂರಿಯನ್ನು ಉದ್ಘಾಟಿಸಿ ನಮ್ಮನ್ನು ಪ್ರೋತ್ಸಾಹಿಸಿದ್ದಾರೆ. ಜುಲೈ 2012ರಲ್ಲಿ ಭಾರತದ 13ನೆಯ ರಾಷ್ಟ್ರಪತಿಗಳಾಗಿ "ಭಾರತದ ಸಂವಿಧಾನದ ಸಂರಕ್ಷಕರಾಗಿ ಸಂವಿಧಾನವನ್ನು ಯಶಸ್ವಿಯಾಗಿ ಉಳಿಸುವ, ರಕ್ಷಿಸುವ ಮತ್ತು ಕಾಯ್ದುಕೊಳ್ಳುವ ಜವಾಬ್ದಾರಿ"ಯನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ಪರವಾಗಿ ಶ್ರೀ ಪ್ರಣಬ್ ಕುಮಾರ್ ಮುಖರ್ಜಿಯವರಿಗೆ ಧನ್ಯವಾಗಳನ್ನರ್ಪಿಸುತ್ತೇನೆ.



ಮತ್ತೊಂದು ಸಂತೋಷದ ವಿಷಯವೆಂದರೆ, ನನ್ನ ಬಹುದಿನಗಳ ಒಡನಾಡಿ ಶ್ರೀ ಎಂ.ವೆಂಕಯ್ಯ ನಾಯ್ಡು ಅವರು ಭಾರತದ 13ನೇ ಉಪರಾಷ್ಟ್ರಪತಿಯಾಗಿ 11 ಆಗಸ್ಟ್ 2017ರಂದು ಅಧಿಕಾರವನ್ನು ವಹಿಸಿಕೊಂಡಿದ್ದಾರೆ. ಶ್ರೀ ನಾಯ್ಡುರವರು ಎರಡು ಅವಧಿಗೆ ಆಂಧ್ರಪ್ರದೇಶದ ವಿಧಾನಸಭಾ ಸದಸ್ಯರಾಗಿದ್ದರು. ರಾಜ್ಯಸಭೆಯಲ್ಲಿ ಕರ್ನಾಟಕವನ್ನು ಮೂರು ಅವಧಿಗಳಿಗೆ ಪ್ರತಿನಿಧಿಸಿದ್ದರು. ಶ್ರೀ ನಾಯ್ಡುರವರು ನಗರಾಭಿವೃದ್ಧಿ, ಗೃಹ ಮತ್ತು ನಗರ ಬಡತನ ನಿವಾರಣೆ ಹಾಗೂ ಮಾಹಿತಿ

ಮತ್ತು ಪ್ರಸಾರ ಖಾತೆಯ ಸಚಿವರಾಗಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಸನ್ಮಾನ್ಯ ಶ್ರೀ ವೆಂಕಯ್ಯ ನಾಯ್ಡುರವರ ಉಪರಾಷ್ಟ್ರಪತಿ ಅವಧಿಯು ಯಶಸ್ವಿಯಾಗಲೆಂದು ಹಾರೈಸುತ್ತೇನೆ ಮತ್ತು ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ಅಭಿನಂದಿಸುತ್ತೇನೆ.



ಎಪ್ಪತ್ತೊಂದನೆಯ ಸ್ವಾತಂತ್ರ್ಯದಿನದಂದು ಸತತ 4ನೇ ಬಾರಿಗೆ ದೇಶವನ್ನುದ್ದೇಶಿಸಿ ಮಾತನಾಡಿದ ಸನ್ಮಾನ್ಯ ಪ್ರಧಾನಮಂತ್ರಿ ಶ್ರೀ ನರೇಂದ್ರಮೋದಿಯವರು ಕೆಲವಾರು ಮುಖ್ಯ ಅಂಶಗಳನ್ನು ದೇಶದೊಂದಿಗೆ ಹಂಚಿಕೊಂಡಿದ್ದಾರೆ. 2022ಕ್ಕೆ ದೇಶದ ಪ್ರತಿಯೊಬ್ಬ ನಾಗರೀಕನೂ ಸ್ವಂತ ಮನೆಯನ್ನು ಹೊಂದಿ, ಉತ್ತಮ ಆದಾಯವನ್ನು ಗಳಿಸುತ್ತಾರೆ ಎಂಬ ಆಶಯ ವ್ಯಕ್ತಪಡಿಸಿದ ಪ್ರಧಾನ ಮಂತ್ರಿಯವರು "ಜಾತೀಯತೆ, ಉಗ್ರವಾದ, ಭ್ರಷ್ಟಾಚಾರ ಮತ್ತು ಸ್ವಜನ ಪಕ್ಷಪಾತವಿಲ್ಲದ ಸ್ವಚ್ಛ ಭಾರತವನ್ನು ಕಟ್ಟಬೇಕು" ಎಂದು ಆಶಿಸಿದ್ದಾರೆ. ದೇಶದ ಸಾಮಾಜಿಕ, ಆರ್ಥಿಕ ಮುನ್ನಡೆಗೆ ನೀಲನಕ್ಷೆಯೊಂದನ್ನು ನೀಡಿದ್ದಾರೆ.

ಸ್ವಾತಂತ್ರ್ಯ ದಿನದಂದು, ಮಾಣಿಕ್‌ಷಾ ಪೆರೇಡ್ ಗ್ರೌಂಡ್ಸ್‌ನಲ್ಲಿ ಧ್ವಜಾರೋಹಣ ಮಾಡಿದ ಕರ್ನಾಟಕದ ಮುಖ್ಯ ಮಂತ್ರಿ ಶ್ರೀ ಸಿದ್ದರಾಮಯ್ಯರವರು, ದೇಶದ ಐಕ್ಯತೆ ಮತ್ತು ಸಮಗ್ರತೆಯನ್ನು ಕಾಪಾಡಲು ಭಾರತದ ಬಹುತ್ವ ಮತ್ತು ಒಕ್ಕೂಟದ ತತ್ವಗಳನ್ನು ಅಕ್ಷರಶ: ಅನುಸರಿಸಬೇಕು ಎಂಬ ಸೂಕ್ಷ್ಮವಾದ ವಿಚಾರವನ್ನು ಮಂಡಿಸಿದ್ದಾರೆ. ದೇಶದ ಸರ್ವತೋಮುಖ ಬೆಳವಣಿಗೆಯಲ್ಲಿ ಆಸಕ್ತರಾಗಿರುವ ಎಲ್ಲಾ ಚಿಂತನಾಶೀಲರೂ ಗಮನಿಸಬೇಕಾದ ವಿಷಯವಿದು.

ಆಗಸ್ಟ್ ತಿಂಗಳ 9ನೇ ತಾರೀಖು "ಭಾರತ ಬಿಟ್ಟು ತೊಲಗಿ" ಚಳವಳಿಯ 75ನೇಯ ವಾರ್ಷಿಕೋತ್ಸವ. "ಮಾಡು ಇಲ್ಲವೆ ಮಡಿ" ಎಂಬ ಧ್ಯೇಯದೊಡನೆ ಸಹಸ್ರಾರು ಮಂದಿ ನಮ್ಮ ನಾಡಿನ ಸ್ವಾತಂತ್ರ್ಯಕ್ಕಾಗಿ ತಮ್ಮ ತನು-ಮನ-ಧನವನ್ನು ಅರ್ಪಿಸಿ ಹೋರಾಟ ಮಾಡಿದರು. ಆ ಐತಿಹಾಸಿಕ ಹೋರಾಟದಲ್ಲಿ ಭಾಗವಹಿಸಿದ ಪ್ರತಿಯೊಬ್ಬ ಸ್ವಾತಂತ್ರ್ಯ ಹೋರಾಟಗಾರರಿಗೂ, ಅವರ ಕುಟುಂಬದವರಿಗೂ ಕೃತಜ್ಞತೆಗಳನ್ನು ಅರ್ಪಿಸಬೇಕು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಉಡುಪಿ ಜಿಲ್ಲಾ ಸಂಸ್ಥೆಯ ನೇತೃತ್ವದಲ್ಲಿ ಸುಮಾರು 3000 ರೋವರ್ಸ್, ರೇಂಜರ್ಸ್, ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು 350 ಬಸ್ ನಿಲ್ದಾಣಗಳನ್ನು, "ಭಾರತ ಬಿಟ್ಟು ತೊಲಗಿ" ಆಂದೋಲನದ 75ನೇ ವರ್ಷಾಚರಣೆಯ ಸಂದರ್ಭದಲ್ಲಿ ಸ್ವಚ್ಛಗೊಳಿಸಿದ್ದು ನನಗೆ ಸಂತಸವನ್ನು ಉಂಟುಮಾಡಿದೆ. ಭಾಗವಹಿಸಿದ ಎಲ್ಲಾ ಸ್ಕೌಟ್ಸ್-ಗೈಡ್ಸ್, ಹಾಗು ರೋವರ್ಸ್-ರೇಂಜರ್ಸ್‌ಗಳನ್ನು ನಾನು ಹೃತ್ಪೂರ್ವಕವಾಗಿ ಅಭಿನಂಧಿಸುತ್ತೇನೆ.



ಸ್ವಾತಂತ್ರ್ಯ ಹೋರಾಟಗಾರರು, ಬೆಂಗಳೂರಿನ ಮಾಜಿ ಮೇಯರ್ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾಗಿ ಹಾಗು ಭಾರತದ ರಾಷ್ಟ್ರೀಯ ಆಯುಕ್ತರಾಗಿದ್ದ ಶ್ರೀ ವಿ.ಪಿ. ದೀನದಯಾಳು ನಾಯ್ಡುರವರ ಜನ್ಮ ಶತಮಾನೋತ್ಸವವನ್ನು ರಾಜ್ಯ, ಜಿಲ್ಲೆ, ತಾಲ್ಲೂಕು ಮತ್ತು ಸ್ಥಳೀಯ ಮಟ್ಟದಲ್ಲಿ ಯಶಸ್ವಿಯಾಗಿ ಆಚರಿಸಿಸುವುದು. ಶ್ರೀ ವಿ.ಪಿ. ದೀನದಯಾಳು ನಾಯ್ಡುರವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸೇರಿದಂತೆ, ಸಾರ್ವಜನಿಕ, ಶೈಕ್ಷಣಿಕ, ಧಾರ್ಮಿಕ ಮತ್ತು ಕ್ರೀಡಾ ಸಂಸ್ಥೆಗಳಿಗೆ ಸುಮಾರು ಆರು ದಶಕಗಳಿಗೂ ಹೆಚ್ಚು ಕಾಲ ಸೇವೆಯನ್ನು ಸಲ್ಲಿಸಿದ್ದಾರೆ. ಆಗಸ್ಟ್ 16ರಂದು ರಾಜ್ಯ ಕೇಂದ್ರ ಕಛೇರಿಯ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಶ್ರೀ ವಿ.ಪಿ.ದೀನದಯಾಳು ನಾಯ್ಡುರವರ 100ನೆಯ ಜನ್ಮದಿನವನ್ನು ವೈಭವದಿಂದ ಆಚರಿಸಿದ್ದೇವೆ. ಆಹಾರ ಮತ್ತು ಸಾರ್ವನಿಕ ಸರಬರಾಜು ಹಾಗೂ ಗ್ರಾಹಕ ವ್ಯವಹಾರಗಳ ಸಚಿವ ಸನ್ಮಾನ್ಯ ಶ್ರೀ ಯು.ಟಿ. ಖಾದರ್‌ರವರು ದೀಪಬೆಳಗುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿರುತ್ತಾರೆ.

ನಮ್ಮ ಶಿಬಿರಗಳು, ತರಬೇತಿಗಳು ಯಶಸ್ವಿಯಾಗಿ ನಡೆಯುತ್ತಿವೆ. ಇತ್ತೀಚೆಗೆ ನಾನು ಆರಂಭಿಸಿರುವ "ಪಿ.ಜಿ.ಆರ್.ಸಿಂಧ್ಯ, ಎಸ್.ಸಿ.ಸಿ. ಬಿಎಸ್‌ಜಿ(ಕೆ)" ವಾಟ್ಸ್ ಅಪ್ ಗುಂಪಿನಲ್ಲಿ ಹಲವಾರು ಚಟುವಟಿಕೆಗಳು ವರದಿಯಾಗುತ್ತಿವೆ. ಅಂತೆಯೇ "ಫೇಸ್‌ಬುಕ್" ಮಾಧ್ಯಮವೂ ಮಾಹಿತಿ ಪ್ರಸಾರಕ್ಕೆ ಅನುವು ಮಾಡಿಕೊಟ್ಟಿದೆ. "ವಾಟ್ಸ್ ಅಪ್" ಗುಂಪಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳಿಗೆ ಸಂಬಂಧಿಸಿದ ಪ್ರಸ್ತುತಿಗಳನ್ನು ಮಾತ್ರ ಅಂಟಿಸಬೇಕೆಂದು ನನ್ನ ಕೋರಿಕೆ. ಈ ಮಾಧ್ಯಮವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುವುದು ನಮ್ಮ ಕೈಯಲ್ಲಿದೆ. ನಿಮ್ಮ ಪ್ರಸ್ತುತಿಗಳು ಚಿಕ್ಕದಾಗಿ, ಚೊಕ್ಕವಾಗಿ, ಅರ್ಥಪೂರ್ಣವಾಗಿ ಇರಲಿ. ಛಾಯಾಚಿತ್ರಗಳು ಸ್ಪಷ್ಟವಾಗಿ ಪ್ರಮುಖ ಚಟುವಟಿಕೆಗಳನ್ನು ಬಿಂಬಿಸುವಂತಿದ್ದರೆ ಅನುಕೂಲ.

ಸಂತಸದ ವಿಷಯವೆಂದರೆ, ಸತತವಾಗಿ ಮೂರನೆಯ ವರ್ಷ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ "ಕರ್ನಾಟಕ ದರ್ಶನ" ಆಯೋಜಿಸುವ ಕಾರ್ಯಕ್ರಮಕ್ಕೆ ಚಾಲನೆ ದೊರೆತಿದೆ. ಇದು ನಮ್ಮ ಸಂಸ್ಥೆಯ ಒಂದು ಮಹತ್ತರ ಸಾಧನೆ. ನಮ್ಮ ಯೋಜನೆಗೆ ಬೆನ್ನೆಲುಬಾಗಿ ಅನುದಾನವನ್ನು ಬಿಡುಗಡೆ ಮಾಡಿರುವ ಕರ್ನಾಟಕ ಸರ್ಕಾರ, ಸನ್ಮಾನ್ಯ ಮುಖ್ಯ ಮಂತ್ರಿ ಶ್ರೀ ಸಿದ್ದರಾಮಯ್ಯ



ಮತ್ತು ಪ್ರವಾಸೋದ್ಯಮ ಸಚಿವರಾದ ಸನ್ಮಾನ್ಯ ಶ್ರೀ ಪ್ರಿಯಾಂಕ ಖರ್ಗೆ ಅವರಿಗೆ ನಾನು ಕೃತಜ್ಞನಾಗಿದ್ದೇನೆ. ಈ ಕಾರ್ಯಕ್ರಮದಿಂದ ಮಕ್ಕಳಿಗೆ ಕನ್ನಡ ನಾಡಿನ ವೈವಿಧ್ಯತೆ, ಸಾಂಸ್ಕೃತಿಕ ಹಿರಿಮೆ, ಜನಜೀವನ ಪರಿಚಯವಾಗುತ್ತದೆ.

2017–2022ನೇ ಸಾಲಿನ ಚುನಾವಣೆಗಳು ಆರಂಭವಾಗಿವೆ. ಈಗಾಗಲೇ ಆಜೀವ ಸದಸ್ಯರಿಂದ ರಾಜ್ಯ ಪರಿಷತ್ ಸಮಿತಿ ಸಭೆಗೆ ಹತ್ತು ಜನರು ಆಯ್ಕೆಯಾಗಿದ್ದಾರೆ. ಚಳವಳಿಯ ಚಟುವಟಿಕೆಗಳ ಬೆಳವಣಿಗೆಗೆ ಅವರು ಹೆಚ್ಚಿನ ಕಾಣಿಕೆಯನ್ನು ನೀಡುತ್ತಾರೆ ಎಂದು ಆಶಿಸುತ್ತೇನೆ. ಅಂತೆಯೇ ಅಧ್ಯಕ್ಷರು, ಉಪಾಧ್ಯಕ್ಷರುಗಳು, ರಾಜ್ಯ ಮುಖ್ಯ ಆಯುಕ್ತರು, ಕಾರ್ಯಕಾರಿ ಮತ್ತು ಹಣಕಾಸುಗಳಿಗೆ ಸಮಿತಿಗೆ ಚುನಾವಣಾ ಪ್ರಕ್ರಿಯೆ ನಡೆಯುತ್ತಿದೆ. ಸೆಪ್ಟೆಂಬರ್ 10, 2017ರಂದು ರಾಜ್ಯ ಪರಿಷತ್ತಿನ ಸಭೆಯು ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಕೇಂದ್ರದಲ್ಲಿ ಸೇರಲಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಪ್ರಜಾಸತಾತ್ಮಕವಾಗಿ ತನ್ನ ಚಟುವಟಿಕೆಗಳನ್ನು ನಡೆಸುತ್ತಿರುವುದು ಈ ಚುನಾವಣೆಗಳ ಮೂಲಕ ಸರ್ವವಿಧಿತ.



ರಾಜ್ಯದ ಕೆಲವೆಡೆ ಬರದ ಛಾಯೆ ಇದೆ. ಸರ್ಕಾರವು ಮೋಡ ಬಿತ್ತನೆಯಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಕೆಲವೆಡೆ ಹೆಚ್ಚು ಮಳೆಯೂ ಆಗಿದೆ. ಪರಿಸರವನ್ನು ಕಾಪಾಡುವುದರ ಬಗ್ಗೆ ಸಾಮಾಜಿಕವಾಗಿ ನಮಗಿರುವ ನಿಷ್ಕಾಳಜಿಗೆ ನಾವು ಹೆಚ್ಚಿನ ಬೆಲೆಯನ್ನು ತೆರಬೇಕಾಗುತ್ತದೆ. ಹವಾಮಾನದ ಏರು–ಪೇರು, ಮಾನವ ನಿರ್ಮಿತ ಪ್ರವಾಹ, ಬರ, ನಮ್ಮನ್ನು ಕಾಡಲಿದೆ. ಈಗಲೇ ನಾವು ಎಚ್ಚೆತ್ತುಕೊಂಡು ಪರಿಸರ ರಕ್ಷಣೆಯ ಬಗ್ಗೆ ವೈಜ್ಞಾನಿಕ ಕ್ರಮಗಳನ್ನು ಕೈಗೊಳ್ಳಬೇಕು ಮತ್ತು ಸಾರ್ವತ್ರಿಕ ಜನಜಾಗೃತಿಯನ್ನು ಉಂಟುಮಾಡಬೇಕು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯು ಕೈಗೊಂಡಿರುವ ನೀರಿನ ಸಂರಕ್ಷಣೆಯ ಚಳವಳಿಯು ನಿರಂತರವಾಗಿ ನಡೆಯಬೇಕು. ನಮ್ಮೆಲ್ಲಾ ಸದಸ್ಯರು, ನಾಯಕರು ಈ ಬಗ್ಗೆ ತಮ್ಮ ಗಮನವನ್ನು ಹರಿಸಬೇಕು.

ಶ್ರಾವಣ ಕಳೆದು ಭಾದ್ರಪದ ಕಾಲಿಟ್ಟಿದೆ. ಗೌರಿ–ಗಣೇಶ ಹಬ್ಬ ಈ ತಿಂಗಳ 24 ಮತ್ತು 25ರಂದು, ಎಲ್ಲರೂ ಹಬ್ಬವನ್ನು ಸಂತಸದಿಂದ ಆಚರಿಸಿ, ಪರಿಸರ ಕಾಳಜಿ ಇರಲಿ. ಸೆಪ್ಟೆಂಬರ್ 2ರಂದು ಬಕ್ರೀದ್, ಸೆಪ್ಟೆಂಬರ್ 20 ರಿಂದ ನಾಡಹಬ್ಬ ದಸರಾ ಆರಂಭವಾಗಲಿದೆ. ನಿಮಗೆಲ್ಲರಿಗೂ ಹೃತ್ಪೂರ್ವಕ ಶುಭಾಶಯಗಳು.

ಸೆಪ್ಟೆಂಬರ್ 5 ರಂದು ಭಾರತದ ದ್ವಿತೀಯ ರಾಷ್ಟ್ರಪತಿ ಡಾ॥ ಎಸ್.ರಾಧಕೃಷ್ಣನ್‌ರವರ ಜನ್ಮ ದಿನ ಹಾಗೂ ಶಿಕ್ಷಕರ ದಿನಾಚರಣೆ. ನಮ್ಮ ಸಂಸ್ಥೆಯು ಉಪಾಧ್ಯಾಯರ ಶಕ್ತಿ, ಶ್ರಮದ ಮೂಲಕವಾಗಿ ಬೆಳೆಯುತ್ತಿದೆ. ವಿಶೇಷವಾಗಿ ಶಿಕ್ಷಣ ಇಲಾಖೆಯು ನಮ್ಮ ಚಟುವಟಿಕೆಯ ಬೆನ್ನೆಲುಬಾಗಿದೆ. ಸ್ಕೌಟ್ಸ್ ಗೈಡ್ಸ್ ತರಬೇತಿಯಲ್ಲಿ ಮಗ್ನರಾಗಿರುವ ಶಿಕ್ಷಕರಿಗೂ, ಪೋಷಕರಿಗೂ ನನ್ನ ಕೃತಜ್ಞತೆಗಳು."ನಿಮ್ಮ ದೈಹಿಕ ಮತ್ತು ಭೌದ್ಧಿಕ ಶ್ರಮ, ಕಾಣಿಕೆಗಳಿಂದ ಚಳವಳಿಯು ಇನ್ನೂ ಹೆಚ್ಚಿನ ಸಾಧನೆಗಳನ್ನು ಮಾಡುತ್ತದೆಂದು ನಾನು ಭಾವಿಸುತ್ತೇನೆ.

**ಹಲವು ಜಿಲ್ಲೆಗಳು ಇತ್ತೀಚಿನ ವರ್ಷಗಳಲ್ಲಿ ವಯಸ್ಕರ ಮೂಲತರಬೇತಿ ಶಿಬಿರಗಳನ್ನು ನಡೆಸದೆ ಇರುವುದು ಕಂಡುಬಂದಿದೆ. ಜಿಲ್ಲಾ ಸಂಸ್ಥೆಗಳು ಈ ಕೂಡಲೇ ಕಾರ್ಯಪ್ರವೃತ್ತರಾಗಿ ಸ್ಕೌಟ್–ಗೈಡ್, ಕಬ್–ಬುಲ್‌ಬುಲ್ ಘಟಕಗಳ ನಾಯಕ–ನಾಯಕಿಯರ ಮೂಲತರಬೇತಿ ಶಿಬಿರಗಳನ್ನು ಸೆಪ್ಟಂಬರ್–ಅಕ್ಟೋಬರ್ ಮಾಸಗಳಲ್ಲಿ ಕಡ್ಡಾಯವಾಗಿ ಹಮ್ಮಿಕೊಳ್ಳಲು ಸೂಚಿಸುತ್ತೇನೆ. ಇದರ ಬಗ್ಗೆ ಪೂರ್ವಭಾವಿಯಾಗಿ ಸಂಬಂಧಪಟ್ಟ ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳನ್ನು ಭೇಟಿ ಮಾಡಿ, ಅಭ್ಯರ್ಥಿಗಳ ನಿಯೋಜನೆ ಮುಂತಾದ ವಿವರವಾದ ವರದಿಯೊಡನೆ ರಾಜ್ಯಸಂಸ್ಥೆಗೆ ಅನುದಾನಕ್ಕಾಗಿ ಕೋರಿದಲ್ಲಿ ಅನುದಾನ ಬಿಡುಗಡೆ ಮಾಡಲಾಗುವುದು.**

ಎಲ್ಲಾ ಸಾರ್ವತ್ರಿಕ ಚಟುವಟಿಕೆಗಳಲ್ಲಿ ಭಾಗವಹಿಸಿ, ವೈಯಕ್ತಿಕವಾದ, ಶೈಕ್ಷಣಿಕ, ದೈಹಿಕ ಮತ್ತು ಸರ್ವತೋಮುಖ ಬೆಳವಣಿಗೆಯ ಬಗ್ಗೆ ಗಮನ ನೀಡಿರಿ.

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**
**"ಒಗ್ಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ"**

ತಮ್ಮ ವಿಶ್ವಾಸಿ
ಪಿ.ಜಿ.ಆರ್. ಸಿಂಧ್ಯ
ರಾಜ್ಯ ಮುಖ್ಯ ಆಯುಕ್ತರು

28/12/17
4/01/2017

# ರಾಜ್ಯ ವಾರ್ತೆಗಳು

## ತರಬೇತುದಾರರ ರಾಜ್ಯಮಟ್ಟದ ಪುನಶ್ಚೇತನ ತರಬೇತಿ ಶಿಬಿರ

ಆಗಸ್ಟ್ 9 ರಿಂದ 11 ರ ವರೆಗೆ ಭಾರತ್ ಸ್ಕೌಟ್ಸ್–ಗೈಡ್ಸ್ ರಾಜ್ಯಸಂಸ್ಥೆ ವತಿಯಿಂದ ತರಬೇತುದಾರರ ರಾಜ್ಯಮಟ್ಟದ ಪುನಶ್ಚೇತನ ತರಬೇತಿ ಶಿಬಿರವನ್ನು ಡಾ॥ ಅನಿಬೆಸೆಂಟ್ ಸ್ಕೌಟ್ಸ್–ಗೈಡ್ಸ್ ರಾಜ್ಯತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಏರ್ಪಡಿಸಲಾಗಿತ್ತು.





ಈ ಶಿಬಿರದಲ್ಲಿ ರಾಜ್ಯಾದ್ಯಂತ ಸ್ಕೌಟ್ ವಿಭಾಗದಲ್ಲಿ 20 ಶಿಬಿರಾರ್ಥಿಗಳು ಹಾಜರಾಗಿದ್ದು, ಶ್ರೀ ಅರುಣ್ ಚಂದ್ರಪತಾರ್, ಸಹಾಯಕ ನಿರ್ದೇಶಕರು, ದಕ್ಷಿಣ ಪ್ರಾಂತೀಯ ಕಛೇರಿ, ಭಾ.,ಸ್ಕೌ..ಗೈ. ಇವರು ನಾಯಕರಾಗಿದ್ದರು. ಶ್ರೀ ಎನ್. ಶ್ರೀನಿವಾಸನ್, ಎಲ್.ಟಿ.(ಸ್ಕೌ) ಶ್ರೀ ಆರ್. ಚಂದ್ರಶೇಖರನ್, ಎಲ್.ಟಿ. (ಕಬ್), ಶ್ರೀ ಯು. ಗೋಪಾಲಕೃಷ್ಣಭಟ್, ಎಲ್.ಟಿ.(ಸ್ಕೌಟ್) ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು(ಸ್ಕೌಟ್) ಶಿಬಿರಾರ್ಥಿ ಹಾಗೂ ಸಿಬ್ಬಂದಿಯಾಗಿ ಕಾರ್ಯನಿರ್ವಹಿಸಿದರು.

ಗೈಡ್ ವಿಭಾಗದ ನಾಯಕಿಯಾಗಿ ಶ್ರೀಮತಿ ಮಾಚಮ್ಮ ಉಪನಿರ್ದೇಶಕರು(ಗೈ) ಎಲ್.ಟಿ. ರಾಷ್ಟ್ರೀಯ ಕೇಂದ್ರ ಕಛೇರಿ, ಭಾ.ಸ್ಕೌ–ಗೈ ಇವರು ಕಾರ್ಯನಿರ್ವಹಿಸಿದರು. ಶ್ರೀಮತಿ ಅರುಣ ಮಾಲಾ, ಎಲ್.ಟಿ.(ಜಿ.) ಸಹಾಯಕರಾಗಿ ಕಾರ್ಯನಿರ್ವಹಿಸಿದರು. ಶ್ರೀಮತಿ ಗೀತಾ ನಟರಾಜ್, ಎಲ್.ಟಿ.(ಜಿ.) ಹಾಗೂ ರಾಜ್ಯ ಆಯುಕ್ತರು (ಗೈ) ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್ ಎಲ್.ಟಿ.(ಜಿ) ಶಿಬಿರಾರ್ಥಿ ಹಾಗೂ ಸಿಬ್ಬಂದಿಗಳಾಗಿ ಕಾರ್ಯನಿರ್ವಹಿಸಿದರು. ಕರ್ನಾಟಕ ರಾಜ್ಯದಿಂದ ಒಟ್ಟು 30, ಕೇರಳದಿಂದ 2, ತಮಿಳುನಾಡಿನಿಂದ 5 ಸೇರಿ ಒಟ್ಟು 37 ಶಿಬಿರಾರ್ಥಿಗಳು ಹಾಜರಾಗಿದ್ದರು.

ಶಿಬಿರದಲ್ಲಿ, ಉದ್ದೇಶಗಳ ರಚನೆ, ವಯಸ್ಕರ ತರಬೇತಿ, ತರಬೇತುದಾರರ ಕೌಶಲ್ಯ, ಧ್ವಜಾರೋಹಣ ಮುಂತಾದ ವಿಷಯಗಳ ಬಗ್ಗೆ ಮಾಹಿತಿ ಹಾಗೂ ಉಪನ್ಯಾಸ ನೀಡಲಾಯಿತು.

ಆಗಸ್ಟ್ 11 ರಂದು ಸರ್ವಧರ್ಮ ಪ್ರಾರ್ಥನೆ ನಡೆಯಿತು. ಅಂದೇ 12 ಗಂಟೆಗೆ ನಡೆದ ಸಮಾರೋಪ ಸಮಾರಂಭದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಭಾಗವಹಿಸಿ ಮಾತನಾಡುತ್ತಾ ತರಬೇತಿದಾರರ ಜವಾಬ್ದಾರಿಗಳ ಬಗ್ಗೆ ತಿಳಿಸಿದರು ಮತ್ತು ಹೊರರಾಜ್ಯಗಳ 7 ಅಭ್ಯರ್ಥಿಗಳನ್ನು ಮತ್ತು ಶಿಬಿರದ ನಾಯಕರನ್ನು ಸನ್ಮಾನಿಸಿದರು. ಶ್ರೀಮತಿ ಗೀತಾ ನಟರಾಜ್ ರವರು ಸರ್ವರನ್ನು ಸ್ವಾಗತಿಸಿದರು. ಶ್ರೀ ಎಲ್.ಟಿ. ಲೋಕೇಶ್, ರಾಜ್ಯತರಬೇತಿ ಆಯುಕ್ತರು(ಸ್ಕೌಟ್ಸ್) ರವರು ಕಾರ್ಯಕ್ರಮ ನಿರೂಪಿಸಿದರು. ಶ್ರೀಮತಿ ಕೆ.ವಿ. ಶ್ಯಾಮಲ, ರಾಜ್ಯ ತರಬೇತಿ ಆಯುಕ್ತರು (ಗೈ) ವಂದನೆ ಸಲ್ಲಿಸಿದರು.

## ಮಂಗಳೂರಿನಲ್ಲಿ ಜಾಂಬೋರೇಟ್



ಸ್ಕೌಟಿಂಗ್-ಗೈಡಿಂಗ್‌ನಲ್ಲಿ ರಾಜ್ಯದಲ್ಲಿಯೇ ಅತ್ಯಂತ ಕ್ರಿಯಾಶೀಲ ಹಾಗು ಮುಂಚೂಣಿಯಲ್ಲಿರುವ ದ.ಕ. ಜಿಲ್ಲಾ ಭಾರತ್ ಸ್ಕೌಟ್ಸ್-ಗೈಡ್ಸ್ ಆಶ್ರಯದಲ್ಲಿ ಡಿಸೆಂಬರ್ 17 ರಿಂದ 23 ರ ವರೆಗೆ ರಾಜ್ಯ ಮಟ್ಟದ 'ಜಾಂಬೋರೇಟ್' ಸಮಾವೇಶ ಮಂಗಳೂರಿನ ಕೂಳೂರಿನಲ್ಲಿ ಆಯೋಜಿಸಲಾಗಿದೆ.

ಸಮಾವೇಶದ ಕುರಿತಂತೆ ದ.ಕ. ಜಿಲ್ಲಾ ಉಸ್ತುವಾರಿ ಸಚಿವ ಶ್ರೀ ಬಿ. ರಮಾನಾಥ ರೈ ಅವರ ಅಧ್ಯಕ್ಷತೆಯಲ್ಲಿ ಜಿಲ್ಲಾಧಿಕಾರಿ ಕಚೇರಿಯಲ್ಲಿ ಆಗಸ್ಟ 22 ರಂದು ಪೂರ್ವಭಾವಿ ಸಭೆ ನಡೆಯಿತು.

ಸ್ಕೌಟ್ಸ್-ಗೈಡ್ಸ್‌ನ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಮಾತನಾಡಿ, ಸಮಾವೇಶಕ್ಕೆ ಪೂರಕವಾಗಿ ವಿವಿಧ ಸಮಿತಿಗಳನ್ನು ರಚಿಸಿ ಸಿದ್ಧತೆಗಳನ್ನು ಮಾಡಿಕೊಳ್ಳಬೇಕಿದೆ. ದೇಶದ ವಿವಿಧ ರಾಜ್ಯಗಳಿಂದ ಮಾತ್ರವಲ್ಲದೆ ಶ್ರೀಲಂಕಾ, ಬಾಂಗ್ಲಾದೇಶದಿಂದಲೂ ತಲಾ ಒಂದು ತಂಡ ಭಾವಹಿಸುವಂತೆ ವ್ಯವಸ್ಥೆ ಮಾಡಲು ಚಿಂತಿಸಲಾಗಿದೆ. ಅದಕ್ಕಾಗಿ ಒಂದು ವಾರಕಾಲ ಸಮಾವೇಶದಲ್ಲಿ ವಿದ್ಯಾರ್ಥಿಗಳಿಗೆ ಸುಮಾರು 1200 ರಷ್ಟು ಟೆಂಟ್‌ಗಳ ವ್ಯವಸ್ಥೆ, 1000 ದಷ್ಟು ಶೌಚಾಲಯಗಳ ವ್ಯವಸ್ಥೆ, ನೀರು, ಸಾರಿಗೆ ಹಾಗೂ ಪಾರ್ಕಿಂಗ್ ವ್ಯವಸ್ಥೆ ಕಲ್ಪಿಸಲು ವ್ಯವಸ್ಥೆ ಮಾಡಬೇಕು ಎಂದು ಅವರು ಸಚಿವರನ್ನು ಆಗ್ರಹಿಸಿದರು.

ಸಮಾವೇಶದಲ್ಲಿ ಭಾಗವಹಿಸುವ ಸ್ಕೌಟ್ಸ್-ಗೈಡ್ಸ್‌ಗಳು ತಾವೇ ತಮ್ಮ ಆಹಾರವನ್ನು ತಯಾರಿಸಿಕೊಳ್ಳಲಿದ್ದು, ಅದಕ್ಕಾಗಿ ಸೂಕ್ತ ಅಡುಗೆ ಕೋಣೆಯ ವ್ಯವಸ್ಥೆಯನ್ನು ಸಮಾವೇಶ ಸ್ಥಳಲ್ಲಿ ಕಲ್ಪಿಸಬೇಕಿದೆ. ಅಡುಗೆ ಅನಿಲ, ಆಹಾರ ಸಾಮಗ್ರಿಗಳೊಂದಿಗೆ 33 ಅಡುಗೆ ಕೋಣೆಗಳು ಹಾಗೂ ಒಂದು ಮಾಸ್ಟರ್ ಅಡುಗೆ ಕೋಣೆಯ ವ್ಯವಸ್ಥೆಯನ್ನು ಒದಗಿಸಬೇಕಿದೆ ಎಂದು ಅವರು ತಿಳಿಸಿದರು.

ದ.ಕ. ಜಿಲ್ಲಾ ಉಸ್ತುವಾರಿ ಸಚಿವ ಬಿ. ರಮಾನಾಥ ರೈ ಅವರು ಮಾತನಾಡಿ, ದ.ಕ. ಜಿಲ್ಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳು ಉತ್ತಮವಾಗಿದ್ದು, ಜಾಂಬೋರೇಟ್ ಸಮಾವೇಶ ನಡೆಸಲು ಜಿಲ್ಲೆಗೆ 27 ವರ್ಷಗಳ ಬಳಿಕ ಅವಕಾಶ ದೊರಕಿದೆ. ಅದನ್ನು ಯಶಸ್ವಿಯಾಗಿ ನಿರ್ವಹಿಸಲು ಜಿಲ್ಲಾಡಳಿತ ಸಿದ್ಧತೆಗಳನ್ನು ನಡೆಸಬೇಕು. ಈ ಕುರಿತಂತೆ ಶೀಘ್ರದಲ್ಲಿ ಸಮಿತಿ ರಚಿಸಿ ಪೂರಕಕ್ರಮಗಳನ್ನು ಕೈಗೊಳ್ಳುವಂತೆ ಅಧಿಕಾರಿಗಳಿಗೆ ಸೂಚಿಸಿದರು.

ದ.ಕ. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ಮಾತನಾಡಿ, 27 ವರ್ಷಗಳ ಬಳಿಕ ರಾಜ್ಯಮಟ್ಟದ ಜಾಂಬೋರೇಟ್ ಸಮಾವೇಶವನ್ನು ದ.ಕ. ಜಿಲ್ಲೆಯಲ್ಲಿ ಆಯೋಜಿಸಲಾಗುತ್ತಿದೆ. ನಗರದ ಕೂಳೂರಿನ 100 ಎಕರೆ ಜಾಗದಲ್ಲಿ ಸಮಾವೇಶವನ್ನು ಆಯೋಜಿಸಲು ತೀರ್ಮಾನಿಸಲಾಗಿದೆ ಎಂದರು. ಶಾಸಕ ಶ್ರೀ ಜೆ.ಆರ್. ಲೋಬೊ, ಮೇಯರ್ ಶ್ರೀಮತಿ ಕವಿತಾ ಸನಿಲ್, ಜಿಲ್ಲಾಧಿಕಾರಿ ಡಾ। ಕೆ.ಜಿ. ಜಗದೀಶ್, ಅಪರ ಜಿಲ್ಲಾಧಿಕಾರಿ ಶ್ರೀ ಕುಮಾರ್, ಪೊಲೀಸ್ ವರಿಷ್ಠಾಧಿಕಾರಿ, ಶ್ರೀ ಸುಧೀರ್ ಕುಮಾರ್ ರೆಡ್ಡಿ ಉಪಸ್ಥಿತರಿದ್ದರು.

## ಕಬ್ಸ್ ಮತ್ತು ಬುಲ್-ಬುಲ್ಸ್ ಪದಕ ಕಾರ್ಯಾಗಾರ ಶಿಬಿರ ಮತ್ತು ಸದ್ಭಾವನಾ ದಿನಾಚರಣೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆ ವತಿಯಿಂದ ಆಗಸ್ಟ 19 ರಿಂದ 21ರವರೆಗೆ ರಾಜ್ಯ ತರಬೇತಿ ಕೇಂದ್ರ ದೊಡ್ಡಬಳ್ಳಾಪುರ ಇಲ್ಲಿ ಕಲಬುರಗಿ ವಿಭಾಗದ ಕಬ್ಸ್ ಬುಲ್ಸ್-ಬುಲ್ಸ್ ಪದಕ ತರಬೇತಿ ಶಿಬಿರವನ್ನು ನಡೆಸಲಾಯಿತು.

ಪ್ರವೇಶದಿಂದ ತೃತೀಯ ಚರಣ್ ಮತ್ತು ಸುವರ್ಣ ಪಂಖ್ ವರೆಗಿನ ವಿವಿಧ ತರಬೇತಿಯನ್ನು ನೀಡಲಾಯಿತು,.

ಆಗಸ್ಟ 21 ರಂದು ಮುಕ್ತಾಯ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಕಬ್ಸ್, ಬುಲ್-ಬುಲ್ಸ್‌ಗಳನ್ನು ಕುರಿತು ಪ್ರೋತ್ಸಾಹಕ ನುಡಿಗಳನ್ನಾಡಿದರು.





ಆಗಸ್ಟ್ 20ರಂದು ದಿ॥ ಶ್ರೀ ರಾಜೀವ್ ಗಾಂಧಿ, ಮಾಜಿ ಪ್ರಧಾನ ಮಂತ್ರಿಗಳು, ಇವರ ಜನ್ಮದಿನಾಚರಣೆಯನ್ನು ಸದ್ಭಾವನಾ ದಿನಾಚರಣೆಯನ್ನಾಗಿ ಆಚರಿಸಲಾಯಿತು. ಇದರ ಪ್ರಯುಕ್ತ ಜಾತಿ, ಧರ್ಮ, ಮತ, ಭಾಷೆಗಳ ಬೇದವಿಲ್ಲದೆ ಭಾರತದ ಎಲ್ಲಾ ಪ್ರಜೆಗಳು ಸೌಹಾರ್ದಯುತವಾಗಿ ಕಾರ್ಯನಿರ್ವಹಿಸುತ್ತೇವೆ ಎಂಬ ಪ್ರತಿಜ್ಞೆಯನ್ನು ರಾಜ್ಯ ಮುಖ್ಯ ಆಯುಕ್ತರು ಭೋದಿಸಿದರು.



ಬೆಂಗಳೂರು ಉತ್ತರ, ಕೋಲಾರ, ದಾವಣಗೆರೆ, ಬೀದರ್, ಚಿಕ್ಕಬಳ್ಳಾಪುರ, ತುಮಕೂರು ಜಿಲ್ಲೆಗಳಿಂದ 110 ಕಬ್ಸ್ ಬುಲ್-ಬುಲ್ಸ್‌ಗಳು ಮತ್ತು ಕಬ್ ಮಾಸ್ಟರ್ಸ್, ಫ್ಲಾಕ್‌ಲೀಡರ್ಸ್ ಭಾಗವಹಿಸಿದ್ದರು. ಶ್ರೀ ಅನಿಲ್ ಕುಮಾರ್ ಶಾಸ್ತ್ರಿ, ಎ.ಎಲ್.ಟಿ(ಸ್ಕೌ), ಬೀದರ್, ಶ್ರೀಮತಿ ನಾಗರತ್ನಮ್ಮ, ಎ.ಎಲ್.ಟಿ(ಬಿ) ಇವರುಗಳು ನಾಯಕರರಾಗಿ ಉತ್ತಮವಾಗಿ ಸೇವೆ ಸಲ್ಲಿಸಿದರು..

ಶ್ರೀ ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌ), ಶ್ರೀಮತಿ ಮಂಜುಳ, ರಾಜ್ಯ ಸಂಘಟನಾ ಆಯುಕ್ತರು (ಗೈ) ಇವರು ಶಿಬಿರದ ಸಂಪೂರ್ಣ ಉಸ್ತುವಾರಿಯನ್ನು ವಹಿಸಿದ್ದರು.

## 71ನೇ ಸ್ವಾತಂತ್ರ್ಯ ದಿನಾಚರಣೆ ಕವಾಯತು ತರಬೇತು ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆ ವತಿಯಿಂದ, ಮಾಣಿಕ್ ಷಾ ಕವಾಯತು ಮೈದಾನದಲ್ಲಿ ಭಾಗವಹಿಸುವ ಸ್ಕೌಟ್ ಮತ್ತು ಗೈಡ್‌ಗಳಿಗೆ ಆಗಸ್ಟ್ 08 ರಿಂದ 15ರವರಿಗೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ, ಬೆಂಗಳೂರು ಇಲ್ಲಿ ತರಬೇತಿ ಶಿಬಿರ ಆಯೋಜಿಸಲಾಗಿತ್ತು.

ರಾಜ್ಯದ 14 ಜಿಲ್ಲೆಗಳಿಂದ 45 ಸ್ಕೌಟ್ ಮತ್ತು 30 ಗೈಡ್‌ಗಳು ಮತ್ತು 10 ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ಸ್‌ಗಳು ಭಾಗವಹಿಸಿದ್ದರು. ಭಾಗವಹಿಸಿದ ಮಕ್ಕಳಿಗೆ ಕವಾಯತು ತರಬೇತಿಯನ್ನು ನೀಡಲಾಯಿತು. ಶ್ರೀ ಹನುಮಂತಪ್ಪ, ನಿವೃತ್ತ ಪೊಲೀಸ್, ಶ್ರೀ ಜಗದೀಶ್, ಸ್ಕೌಟ್ ಮಾಸ್ಟರ್, ಬೆಂಗಳೂರು ದಕ್ಷಿಣ, ಶ್ರೀ ಶ್ರೀಪಾದ್, ಬೆಂಗಳೂರು ಉತ್ತರ, ಇವರುಗಳು ತರಬೇತಿ ನೀಡಿದರು.



ಆಗಸ್ಟ್ 11 ರಿಂದ 13ರವರೆಗೆ ಮಾಣಿಕ್ ಷಾ ಪರೇಡ್ ಗ್ರೌಂಡ್‌ನಲ್ಲಿ ಕವಾಯತು ಅಭ್ಯಾಸವನ್ನು ಮಾಡಿ ಆಗಸ್ಟ್ 15ರಂದು ಮಾನ್ಯ ಮುಖ್ಯ ಮಂತ್ರಿಗಳು ಮತ್ತು ಇತರೆ ಅಧಿಕಾರಿಗಳ ಸಮ್ಮುಖದಲ್ಲಿ 71ನೇ ಸ್ವಾತಂತ್ರ್ಯ ದಿನಾಚರಣೆಯ ಕವಾಯತುನಲ್ಲಿ ಉತ್ತಮ ಪ್ರದರ್ಶನವನ್ನು ನೀಡಿದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ಅವರು ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ಉದ್ದೇಶಿಸಿ ಪ್ರೋತ್ಸಾಹದ ಮಾತುಗಳನ್ನಾಡಿದರು. ಸಮಾರಂಭದಲ್ಲಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ , ರಾಜ್ಯ ಉಪಾಧ್ಯಕ್ಷರು, ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈ), ಹಾಗೂ ರಾಜ್ಯ ಸಂಸ್ಥೆಯ ಇತರೆ ಪದಾಧಿಕಾರಿಗಳು ಉಪಸ್ಥಿತರಿದ್ದು ಮಕ್ಕಳಿಗೆ ಪ್ರಮಾಣ ಪತ್ರವನ್ನು ನೀಡಿಲಾಯಿತು. ಶ್ರೀ ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು(ಸ್ಕೌ) ಇವರು ಶಿಬಿರದ ಉಸ್ತುವಾರಿಯನ್ನು ವಹಿಸಿದ್ದರು.

## ರಾಜ್ಯ ಕೇಂದ್ರ ಕಛೇರಿಯಲ್ಲಿ 71ನೇ ಸ್ವಾತಂತ್ರ ದಿನಾಚರಣೆ

ಆಗಸ್ಟ್ 15ರಂದು ರಾಜ್ಯ ಕೇಂದ್ರ ಕಛೇರಿಯಲ್ಲಿ 71ನೇ ಸ್ವಾತಂತ್ರ ದಿನಾಚರಣೆಯನ್ನು ಆಚರಿಸಲಾಯಿತು. ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಧ್ವಜಾರೋಹಣವನ್ನು ನೆರವೇರಿಸಿ, ಸ್ವಾತಂತ್ರ ದಿನಾಚರಣೆ ಸಂದೇವನ್ನು ನೀಡುತ್ತ ಸ್ವಾತಂತ್ರಕ್ಕಾಗಿ ಹೋರಾಡಿದ ಮಹನೀಯರುಗಳ ತ್ಯಾಗ ಬಲಿದಾನಗಳನ್ನು ಸ್ಮರಿಸಿ, ಸ್ವಾತಂತ್ರದ ಸ್ವಾವಲಂಬನೆಯನ್ನು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪಾಲಿಸುತ್ತಿದ್ದು, ಪರೋಪಕಾರ, ಸಮುದಾಯ ಸೇವೆ, ಸ್ವಅಭಿವೃದ್ಧಿ ಹೊಂದಿ ದೇಶ ಸೇವೆಯನ್ನು ಕಂಕಣ ಬದ್ಧರಾಗಿ ನೆರವೇರಿಸಿ, ಆದರ್ಶ ಭವ್ಯ ಭಾರತದ ಜವಾಬ್ದಾರಿಯುತ ನಾಗರೀಕರಾಗಲು ಕರೆನೀಡಿದರು.

ಈ ಸಂದರ್ಭದಲ್ಲಿ ಶ್ರೀ ಕೊಂಡಜ್ಜಿ ಬ..ಷಣ್ಮುಖಪ್ಪ ಉಪಾಧ್ಯಕ್ಷರು, ಶ್ರೀಮತಿ ಗೀತಾ ನಟರಾಜ್ ರಾಜ್ಯ ಆಯುಕ್ತರು (ಗೈ), ಶ್ರೀ ಪ್ರಭುದೇವ ಚಿಗಟೇರಿ, ರಾಜ್ಯ ಕೋಶಾಧಿಕಾರಿ, ಎಸ್.ಒ.ಸಿ ಮತ್ತು ಎಸ್.ಟಿ.ಸಿ ಸ್ಕೌಟ್ಸ್ ಮತ್ತು ಗೈಡ್ಸ್ ,ರಾಜ್ಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಸಿಬ್ಬಂಧಿ ವರ್ಗದವರು ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸಿದ್ದರು.

## ರಾಜ್ಯ ಮಟ್ಟದ ಮುಂದುವರೆದ ತರಬೇತಿ ಶಿಬಿರಗಳು



ಜುಲೈ 27 ರಿಂದ ಆಗಸ್ಟ್ 2 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ರೋವರ್ ಸ್ಕೌಟ್ ಲೀಡರ್ಸ್‌ಗಳ ಹಾಗೂ ಗೈಡ್ ಕ್ಯಾಪ್ಟನ್‌ಗಳ ರಾಜ್ಯಮಟ್ಟದ ಮುಂದುವರಿದ ತರಬೇತಿ ಶಿಬಿರಗಳನ್ನು, ದಾವಣಗೆರೆ ಜಿಲ್ಲೆ, ಕೊಂಡಜ್ಜಿ ಬಸಪ್ಪ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿಯಲ್ಲಿ ಆಯೋಜಿಸಲಾಗಿತ್ತು. ರೋವರ್ ವಿಭಾಗದಲ್ಲಿ 39 ಶಿಬಿರಾರ್ಥಿಗಳು, ಗೈಡ್ ವಿಭಾಗದಲ್ಲಿ 25 ಶಿಬಿರಾರ್ಥಿಗಳು ಭಾಗವಹಿಸಿದ್ದರು.

ಈ ತರಬೇತಿ ಶಿಬಿರದ ಉದ್ಘಾಟನೆಯನ್ನು ಸ್ಕೌಟ್-ಗೈಡ್ ತರಬೇತಿ ಕೇಂದ್ರದ ಅಭಿವೃದ್ಧಿ ಸಮಿತಿ ಸದಸ್ಯರಾದ ಶ್ರೀ ಜಯಪ್ರಕಾಶ್ ಜೆ. ಚಿಗಟೇರಿಯವರು ಜೂನ್ 27 ರಂದು ದೀಪಬೆಳಗಿಸುವುದರ ಮೂಲಕ ನೆರವೇರಿಸಿ ಮಾತನಾಡುತ್ತಾ, ಕೊಂಡಜ್ಜಿ ಬಸಪ್ಪ ತರಬೇತಿ ಕೇಂದ್ರ ಪ್ರಾರಂಭವಾದ ಕುರಿತು, ಈಗ ಪ್ರಸ್ತುತವಾಗಿ ಅಭಿವೃದ್ಧಿ ಕಾಮಗಾರಿಗಳ ಕುರಿತು ಮಾಹಿತಿ ನೀಡಿ, ತಮ್ಮ ಬಾಲ್ಯದ ಸ್ಕೌಟ್ ಜೀವನವನ್ನು ಮೆಲುಕು ಹಾಕಿದರು. ಈ ಸಂದರ್ಭದಲ್ಲಿ ರೋವರ್ ಸ್ಕೌಟ್ ಲೀಡರ್‌ಗಳ ಮುಂದುವರಿದ ತರಬೇತಿ ಶಿಬಿರದ ನಾಯಕರಾದ ಶ್ರೀ ಎ.ಎಂ. ಶಂಕರ್, ಗೈಡ್ ವಿಭಾಗದ ನಾಯಕಿ ಶ್ರೀಮತಿ ಅರುಣ ಮಾಲಾ, ಶ್ರೀಮತಿ ಎನ್.ಕೆ. ಛಾಯಾ ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು(ಸ್ಕೌಟ್ಸ್) ಉಪಸ್ಥಿತರಿದ್ದರು.



ಜುಲೈ 31 ರಿಂದ ಆಗಸ್ಟ್ 2 ರ ವರೆಗೆ ದಳನಾಯಕ-ನಾಯಕಿಯರಿಗಾಗಿ ಅಗ್ರಗಾಮಿತ್ವ ಮತ್ತು ಅಂದಾಜುಮಾಡುವಿಕೆ ಶಿಬಿರವನ್ನು ಏರ್ಪಡಿಸಲಾಗಿತ್ತು. ಶಿಬಿರದ ನಾಯಕರಾಗಿ ಶ್ರೀ ಜಿಮ್ಮಿ ಸಿಕ್ವೇರಾ, ಎಲ್.ಟಿ.(ಎಸ್.), ಕೊಡಗು ಇವರು ಕಾರ್ಯನಿರ್ವಹಿಸಿದರು. ಈ ಶಿಬಿರದಲ್ಲಿ 73 ಸ್ಕೌಟರ್ ಮತ್ತು 25 ಗೈಡರ್‌ಗಳು ಭಾಗವಹಿಸಿದ್ದರು.

ಜುಲೈ 31 ರಂದು ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್, ಇವರು ತರಬೇತಿ ಶಿಬಿರಕ್ಕೆ ಭೇಟಿ ನೀಡಿ, ಶಿಬಿರವನ್ನು ವೀಕ್ಷಿಸಿದ್ದರು. ಆಗಸ್ಟ್ 2 ರಂದು ಶಿಬಿರದಲ್ಲಿ ಸರ್ವಧರ್ಮ ಸಮನ್ವಯ ಪ್ರಾರ್ಥನೆ ನಡೆಯಿತು.

# 34th New District Association Formed
# Bruhat Bengaluru Mahanagara Palike District Association



The 34th District Association of the Bharat Scouts and Guides, Karnataka was officially formed on 21st July 2017 at Bruhat Bengaluru Mahanagara Palike, Bengaluru. The Schools and Colleges coming under the perview of the Bruhat Bengaluru Mahanagara Palike joined and formed a District Association called "Bruhat Bengaluru Mahanagara Palike District Association" of Bharat Scouts and Guides, Karnataka.

The First Organising Committee Meeting was held on 21st July 2017 under the Chairmanship of Smt G. Padmavathi, Worshipful Mayor of Bengaluru.

Sri S.G. Ravindra, Special Commissioner (Education) B.B.M.P. briefed the meeting about the formation of the New District Council. Smt Pallavi, K.R., Council Secretary and Assistant Commissioner (Education) briefed the Meeting about the Programmes and Activities.

The Mayor in her address said that She was also closely associated during her College Days at Maharani's Arts College and attended camps at Dr.Annie Besant Park, Doddaballapura.

Sri P.G.R. Sindhia, State Chief Commissioner, Bharat Scouts and Guides, Karnataka addressed the Meeting and expressed his gratitude to all the Members and Officials of Bruhat Bengaluru Mahanagara Palike for supporting the Movement and providing Budgetary provisions for Uniforms and other necessary component for Students those who are joining the Scout and Guide Movement.

Sri M. Anand, Deputy Mayor, Sri Mohammed Rizwan Nawab, Ruling Party Leader, Smt Nazeema Khanam, Chairman, Standing Committee for Education, Smt R. Ramila Umashankar, J.D.S. Party Leader, Sri B.Mohan Kumar, Nominated Corporator, Sri Shivanna, Education Officer, Sri D.P. Panchalingamahendraswami, Supervisor, (B.B.M.P. Play Grounds), Sri Venkatakrishnappa, Physical Education Officer, were present and represented from the Bruhat Bengaluru Mahanagara Palike.

Sri Kondajji B. Shanmukhappa, Vice-President, Sri Chinnaswamy Reddy, State Secretary, Sri D.Venkatesh, Assistant State Commissioner (Scouts) Smt B.revathi, Assistant State Commissioner (Guides) and other Officials were present.



During the Meeting the New B.B.M.P. District Council has been constituted

Sri M. A. Chellaiah, Public Relations Officer, Bharat Scouts and Guides, Karnataka and the Nodal Officer for Scouts and Guides, BBMP District Co-ordinated for the successful conduct of the Meeting.



# V.P.DEENADAYALU NAIDU BIRTH CENTENARY CELEBRATIONS (1917-2017) HELD ON 16.08.2017 AT BENGALURU

In Commemoration of the Valuable Services rendered by Sri V.P. Deenadayalu Naidu to Bharat Scouts and Guides, to the Country, Public, Educational Religious and Sports Organizations, The Bharat Scouts and Guides, Karnataka organized Birth Centenary Celebrations on 16th August 2017 at Kondajji Basappa Auditorium, Bengaluru.

Sri U.T. Khader, Hon'ble Minister for Food and Civil Supplies and Consumer Affairs, Government of Karnataka Inaugurated the Celebration by lighting the Lamp and also paid a floral tribute to V.P. Deenadayalu Naidu's Photo. In his address he said that he gratefully remembers the valuable services rendered by Sri V.P. Deenadayalu Naidu to the Bengaluru City development as 7th Mayor and Chairman, CITB and Me mber of Legislative Assembly and the Council. He also further said that he made great contribution to the Bharat Scouts and Guides, Karnataka and the Country as State Chief Commissioner and the National Commissioner. He recalled his close Association with the Scout and Guide Movement from his Student days as President Scout.

Sri P.G.R Sindhia, State Chief Commissioner, in his address said that Sri V.P. Deenadayalu Naidu is a great leader and rendered a valuable service to the community in the field of Political, Education, Spiritual, Social, Sports and Scouts and Guides for about Six decades. He recalled Naidu's close Association as President, Karnataka State Swimming Association, Rotary Club of Bangalore East, Vice-President of Olympic Association, Senior Member for Bar Association of Karnataka and Freedom Fighter Association. Further he said that his contribution to the Bharat Scouts and Guides, Karnataka and the Country is laudable.

Sri Kondajji B. Shanmukhappa, Vice- President in his address said that he has closely worked with Naidu for many years for the development of Scouting and Guiding in the State and also he recalled the close association of Late Naidu with his father Late Sri Kondajji Basappa. Sri Yoganand, Former Governor Rotary Club of International also spoke on the occasion.



Sri D. Venkatesh, Assistant State Commissioner(S) Son of Late of Sri V.P. Deenadayalu Naidu addressed the gathering and thanked on behalf of their family members for organizing the function in a grand manner with Co-operation and support of Sri P.G.R. Sindhia, State Chief Commissioner.

Smt Saroja.V.Naidu, Vice-President, Smt Geetha Nataraj, State Commissioner(G) Sri Prabudev M. Chigateri, State Treasurer, Sri T. Prabhakar, Former State Treasurer, Sri Gangappa Gowda, Former DPI and Assistant State Commissioner(S), Sri K. Narasimhamurthy, Headquarters Commissioner(S), Sri B.S. Ravindra, Special Member State Council Smt B.V. Ramalatha, Smt B.D. Shanta, Assistant State Commissioners, Miss P.Saroja, Sri M.K. Khan, District Chief Commissioners, Sri B.K. Sheshadri, Sri M.S. Satheesh, District Secretaries and the Family Members of V.P. Deenadayalu Naidu were present.

Earlier Sri M.A. Chellaiah, Public Relations Officer, The Bharat Scouts and Guides ,Karnataka and the Convener of Sri V.P. Deenadayalu Naidu Birth Centenary Celebration Committee welcomed the Hon'ble Minister and others who were present. Sri Chinnaswamy Reddy, State Secretary proposed the Vote of thanks.

After the function the following activities were conducted for the Scouts , Guides, Rovers and Rangers

1. National Integration Songs for each unit (One Patrol of Scouts and Guides)
2. Pick and Speak on various topic on Public importance for each Unit (one Scout/Guide)

Certificates were distributed to all the participants and Prizes were distributed to the Winners of the Competitions. Nearly 700 members were present including Scouts, Guides, Rovers and Rangers, Unit Leaders from Bengaluru North and South District and the Invitees. The programme was coordinated by Smt. Kumari Honnamma, District Organizer and the officials of the Bengaluru North and South District.



# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ಆಗಸ್ಟ್ 12 ರಂದು ಜಿಲ್ಲಾ ಮಟ್ಟದ ದೇಶಭಕ್ತಿ ಗೀತೆಗಳ 'ಗೀತಗಾಯನ' ಸ್ಪರ್ಧೆಯನ್ನು ನಡೆಸಲಾಯಿತು. ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಹಾಗೂ ಸ್ಕೌಟ್ಸ್ ಮಾಸ್ಟರ್ಸ್ ಮತ್ತು ಗೈಡ್ಸ್ ಕ್ಯಾಪ್ಟನ್‌ಗಳು ಸ್ಪರ್ಧೆಯಲ್ಲಿ ಪಾಲ್ಗೊಂಡಿದ್ದರು. ಈ ಸ್ಪರ್ಧೆಯಲ್ಲಿ ರಾಜ್ಯ ಮಟ್ಟಕ್ಕೆ ಆಯ್ಕೆಯಾದವರು ಸ್ಕೌಟ್ ವಿಭಾಗದಲ್ಲಿ ಪ್ರಥಮ ಸ್ಥಾನ ಶ್ರೀ ಮಾರ್ತಂಡೇಶ್ವರ ಆಂ. ಮಾ. ಪ್ರೌಢಶಾಲೆ ಎಂ.ಪಿ.ಪಿ. ನಗರ ಹೊಸಪೇಟೆ. ಗೈಡ್ ವಿಭಾಗದಲ್ಲಿ ಶ್ರೀ ಮಾರ್ತಂಡೇಶ್ವರ ಶಾಲೆಯ ಮಕ್ಕಳು ಪ್ರಥಮ ಸ್ಥಾನ ಗಳಿಸಿರುತ್ತಾರೆ.



* ಆಗಸ್ಟ್ 15 ರಂದು 71ನೇ ಸ್ವಾತಂತ್ರ್ಯ ದಿನಾಚರಣೆ ಪ್ರಯುಕ್ತ ಜಿಲ್ಲಾ ಕ್ರೀಡಾಂಗಣದಲ್ಲಿ ಜಿಲ್ಲಾಡಳಿತ ಹಮ್ಮಿಕೊಂಡಿದ್ದ ಕವಾಯತಿನಲ್ಲಿ 4 ಗೈಡ್ ದಳಗಳು ಹಾಗೂ 3 ಸ್ಕೌಟ್ ದಳಗಳು ಮತ್ತು ಒಂದು ಕಬ್ಸ್ ದಳ ಭಾಗವಹಿಸಿದ್ದವು. ಈ ಪಥಸಂಚಲನದಲ್ಲಿ ಅತ್ಯುತ್ತಮ ಸ್ಥಾನವನ್ನು ಶ್ರೀ ಪುಂಕಿ ಮರಿಸಿದ್ದ ಶಾಲೆಯ ಗೈಡ್‌ಗಳು ಪಡೆದಿದ್ದಾರೆ. ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಸಂತೋಷ್ ಲಾಡ್, ಕಾರ್ಮಿಕ ಸಚಿವರು ಇವರು ಪ್ರಶಸ್ತಿ ಪತ್ರ ಹಾಗು ನೆನಪಿನ ಕಾಣಿಕೆಯನ್ನು ನೀಡಿ ಸನ್ಮಾನಿಸದರು.

* ಆಗಸ್ಟ್ 15 ರಂದು 71ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಸಿರಗುಪ್ಪದಲ್ಲಿ ಆಚರಿಸಲಾಯಿತು. ಈ ಕಾರ್ಯಕ್ರಮದಲ್ಲಿ ಶ್ರೀ ಬಿ.ಎಂ. ನಾಗರಾಜ, ಶಾಸಕರು, ಸಿರುಗುಪ್ಪ, ತಹಶೀಲ್ದಾರ, ಶ್ರೀಮತಿ ಸುನೀತಾ, ಶ್ರೀಮತಿ ಪಾರಿಜಾತಮ್ಮ ಮುತ್ಯಾಲಯ್ಯ ಶೆಟ್ಟಿ, ನಗರಸಭೆ ಅಧ್ಯಕ್ಷರು, ಶ್ರೀ ಲಕ್ಷ್ಮೀನಾಗೇಶಪ್ಪ, ತಾಲ್ಲೂಕು ಪಂಚಾಯಿತಿ ಅಧ್ಯಕ್ಷರು, ಶ್ರೀ ಪಿ.ಡಿ ಭಜಂತ್ರಿ, ಶ್ರೀ ಬಿ.ಇ.ಓ. ಸಿರುಗುಪ್ಪ, ಶ್ರೀರಾಮನಗೌಡ ಎನ್.ಜಿ.ಓ. ಅಧ್ಯಕ್ಷರು, ಸಿರುಗುಪ್ಪ ಉಪಸ್ಥಿತರಿದ್ದರು.



ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ 6ನೇ ವಿಭಾಗ, ಸಿರುಗುಪ್ಪ ಶಾಲೆಯ ಸ್ಕೌಟ್‌ಗಳು "ಬೇಡನ್ ಪೋವಲ್" (ಬಿ.ಪಿ. ಟ್ರೂಪ್) ಪಥಸಂಚಲನದಲ್ಲಿ ಪ್ರಥಮ ಸ್ಥಾನ ಗಳಿಸಿರುತ್ತಾರೆ.

## ಬೆಳಗಾವಿ

ಆಗಸ್ಟ್ 8 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ರೋವರ್ ಸ್ಕೌಟ್ ಲೀಡರ್‌ಗಳ ಹಾಗೂ ರೇಂಜರ್ ಲೀಡರ್‌ಗಳ ಸಮಾವೇಶವು ಜರುಗಿತು. ಸದರಿ ಸಮಾವೇಶದಲ್ಲಿ 2017-18 ನೇ ಸಾಲಿನಲ್ಲಿ ಹಮ್ಮಿಕೊಳ್ಳುವ ಚಟುವಟಿಕೆಗಳ ಬಗ್ಗೆ ದೀರ್ಘವಾಗಿ ಚರ್ಚಿಸಿ, ಮಾನ್ಯ ಜಿಲ್ಲಾಧಿಕಾರಿಗಳ ಆದೇಶದಂತೆ ಸ್ವಚ್ಛ ಭಾರತ್ ಅಭಿಯಾನ ಕಾರ್ಯಕ್ರಮ ಹಾಗೂ ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ತಿಂಗಳಿಗೊಮ್ಮೆ ಬೇರೆ ಬೇರೆ ಹಳ್ಳಿಗಳಲ್ಲಿ ಶಿಬಿರವನ್ನು ಹಮ್ಮಿಕೊಂಡು ಶೌಚಾಲಯವನ್ನು ನಿರ್ಮಿಸಿ ಅದನ್ನು ಬಳಸುವ ಬಗ್ಗೆ ಜಾಥಾಗಳ ಮೂಲಕ ಜನಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಂತೆ ತಿಳಿಸಲಾಯಿತು. ಜಿಲ್ಲೆಯ 60 ಮಹಾ ವಿದ್ಯಾಲಯಗಳಿಂದ ರೋವರ್ ಸ್ಕೌಟ್ ಲೀಡರ್ ಹಾಗೂ ರೇಂಜರ್‌ಗಳು ಭಾಗವಹಿಸಿದ್ದರು.



* ಆಗಸ್ಟ್ 9 ರಂದು ರಕ್ಷಾ ಬಂಧನ ಹಬ್ಬದ ಪ್ರಯುಕ್ತ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಹಾಗೂ ಬೆಳಗಾವಿ ಗ್ರಾಮೀಣ ವಲಯದ ಜ್ಞಾನ ಪ್ರಭೋದಿನಿ ಮಂದಿರ ಶಾಲೆಯ ಬುಲ್ ಬುಲ್‌ಗಳಿಂದ ಕೇಂದ್ರ ಕಾರಾಗೃಹ ಬೆಳಗಾವಿ, ಹಿಂಡಲಗಾ ಇಲ್ಲಿ ಇರುವ ಕೈದಿಗಳಿಗೆ ರಾಖಿ ಕಟ್ಟುವ ಮೂಲಕ ಅವರಲ್ಲಿ ಸಹೋದರತ್ವ ಭಾವನೆಯನ್ನು ಮೂಡಿಸಿದರು.

ಸದರಿ ಕಾರ್ಯಕ್ರಮದಲ್ಲಿ ಮಹಾನಗರ ಪಾಲಿಕೆಯ ಮಹಾಪೌರರಾದ ಶ್ರೀಮತಿ ಸಂಜೋತಾ ಬಾಂದಿಕರ್, ಅಪರ ಜಿಲ್ಲಾಧಿಕಾರಿಗಳಾದ ಶ್ರೀ ಸುರೇಶ ಬ. ಇಟ್ನಾಳ, ಕಾರಾಗೃಹ ಸ್ಥಾಯಿಸಮಿತಿ ಸಲಹಾ ಮಂಡಳಿ ಸದಸ್ಯರಾದ ಶ್ರೀ ಅಭಿಮನ್ಯು, ಶ್ರೀ ಮಲ್ಲೇಶ ಚೌಗಲಾ, ಶ್ರೀ ದೀಪಕ ವಾಜಿಲ್, ಶ್ರೀಮತಿ ಅನುಶ್ರೀ ದೇಶಪಾಂಡೆ, ಕಾರಾಗೃಹ ಮುಖ್ಯಸ್ಥರಾದ ಶ್ರೀ ಶೇಷ ಟಿ.ಪಿ. ಕಾರಾಗೃಹದ ಶಿಕ್ಷಕರಾದ ಶ್ರೀ ಎಸ್.ಎಸ್. ಯಾದಗೂಡೆ, ಮಹಾಲಕ್ಷ್ಮೀ ಮಹಿಳಾ ಮಂಡಳದ ಸದಸ್ಯರು, ಫ್ಲಾಕ್ ಲೀಡರ್ ಮತ್ತು ಕಬ್ ಮಾಸ್ಟರ್, ಜಿಲ್ಲಾ ಸಂಘಟಕರಾದ ಶ್ರೀ ಡಿ.ಬಿ. ಅತ್ತಾರ ಹಾಗೂ ಶ್ರೀ ವಿಠ್ಠಲ್ ಎಸ್.ಬಿ. ಉಪಸ್ಥಿತರಿದ್ದರು.



* ಆಗಸ್ಟ್ 10 ರಂದು ಬೆಳಗಾವಿ ನಗರದ ಅಂಗಡಿ ಅಂತರಾಷ್ಟ್ರೀಯ ಶಾಲೆಯಲ್ಲಿ ಕಬ್-ಬುಲ್‌ಬುಲ್ ತಂಡಗಳ ಉದ್ಘಾಟನಾ ಸಮಾರಂಭವು ಜರುಗಿತು. ಸಮಾರಂಭದ ಅಧ್ಯಕ್ಷತೆಯನ್ನು ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ಮಂಗಲಾ ಸುರೇಶ್ ಅಂಗಡಿ ಇವರು ವಹಿಸಿದ್ದರು. ಇವರು ಮಾತನಾಡುತ್ತಾ ಮಕ್ಕಳು ಪಠ್ಯೇತರ ಚಟುವಟಿಕೆಳಲ್ಲಿ ಭಾಗವಹಿಸಬೇಕು ಎಂದು ಹೇಳಿದರು. ಕಾರ್ಯಕ್ರಮದಲ್ಲಿ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಆಶಾ ರಜಪೂತ ಸ್ವಾಗತಿಸಿದರು. ಶ್ರೀಮತಿ ಪೂರ್ಣಿಮಾ ದೇಶಪಾಂಡೆ ನಿರೂಪಿಸಿದರು. ಶ್ರೀಮತಿ ಪ್ರೀತಿ ಬಾಳಿಕಾಯಿ ವಂದಿಸಿದರು. ಜಿಲ್ಲಾ ಸಂಘಟಕರಾದ ಶ್ರೀ ಡಿ.ಬಿ. ಅತ್ತಾರ, ಶ್ರೀ ವಿಠ್ಠಲ್, ಎಸ್.ಬಿ. ಉಪಸ್ಥಿತರಿದ್ದರು. ಮಕ್ಕಳಿಂದ ಆಕರ್ಷಕ ಚಟುವಟಿಕೆಗಳು ಪ್ರದರ್ಶನಗೊಂಡವು.

* ಆಗಸ್ಟ್ 15 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ 71ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಲಾಯಿತು. ಧ್ವಜಾರೋಹಣವನ್ನು ಶ್ರೀ ಜಿ.ಬಿ. ಮನ್ನಿಕೇರಿ, ಜಿಲ್ಲಾ ಮುಖ್ಯ ಆಯುಕ್ತರು ನೆರವೇರಿಸಿದರು. ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀ ಕುಲಕರ್ಣಿ ಆಗಮಿಸಿದ್ದರು. ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. 100 ಕಬ್ ಬುಲ್ ಬುಲ್‌ಗಳು ಭಾಗವಹಿಸಿದ್ದರು. ಜಿಲ್ಲಾ ಆಡಳಿತದಿಂದ ಆಯೋಜಿಸಿದ್ದ ಸಾಮೂಹಿಕ ಪಥಸಂಚಲನದಲ್ಲಿ ವನಿತಾ ವಿದ್ಯಾಲಯದ ಗೈಡ್ಸ್ ತಂಡ ಪ್ರಥಮ ಸ್ಥಾನ ಬಹುಮಾನ ಪಡೆದಿರುತ್ತದೆ.



## Bengaluru North

The Bengaluru North District, Shivajinagar Local Association organised a Seminar for the Unit Lieaders on 29 th July 2017 at St. Mary's Public School, Queens Road, Bengaluru. 15 Members were participated in the Programme.

Sri T.S. Lucas, Vice President. SLA was the Chief Guest.

## Bengaluru South



The Bharat Scouts and Guides, Bangalore South District Association conducted the the 18th Unit Leaders Conference at "Sasya Chetana" District Training Centre, Dharwad. A total of 55 Unit leaders participated.. The participants were oriented on the Proficiency Badges, Unit records and Advancement scheme of Boy and Girl. The District Chief Commissioner of Dharward Mr. M.M. Londe addressed the participants. District Chief Commissioner Mr. M.K. Khan, District Commissioner (s) Mr. P. Palani & District Treasurer Mr. Madhusudan A.S. were present on the Closing Ceremony. The conference was led by Mr. T.K. Narayanaswamy, DTC (S) and he was ably assisted by the Badge Secretary(S) &(G). Logistics were taken care by the District Secretary M.S. Satheesh and Asst. Secretary Mr. Ananth B.S.

## ಚಿತ್ರದುರ್ಗ



ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗದ ವತಿಯಿಂದ ಜೂನ್ 28 ರಿಂದ 30 ರ ವರೆಗೆ ಸ್ಕೌಟ್ ಗಳಿಗೆ ತೃತೀಯ ಸೋಪಾನ್ ಪರೀಕ್ಷಾ ಶಿಬಿರವನ್ನು ಆಯೋಜಿಸಲಾಗಿತ್ತು. ಶ್ರೀ ಸಿ.ಎನ್. ಮಹೇಶ್ ಎಲ್.ಟಿ. (ಸ್ಕೌಟ್) ಇವರು ಶಿಬಿರದ ನಾಯಕತ್ವವನ್ನು ವಹಿಸಿದ್ದರು. ಈ ಶಿಬಿರದ ಉದ್ಘಾಟನೆಯನ್ನು ಶ್ರೀ ಎಂ. ರೇವಣಸಿದ್ದಪ್ಪ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ, ಇವರು ಜೂನ್ 28ರಂದು ನೆರವೇರಿಸಿದರು. ಸ್ಕೌಟ್ಸ್‌ಗಳಿಗೆ ರಾಜ್ಯ ಪುರಸ್ಕಾರ ಪದಕ ಪಡೆಯಲು ಈ ಶಿಬಿರ ಮೊದಲನೆ ಮೆಟ್ಟಿಲು ಮುಖ್ಯ ಎಂದು ತಿಳಿಸಿದರು. ಅಧ್ಯಕ್ಷತೆ ವಹಿಸಿದ್ದ ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್, ಜಿಲ್ಲಾ ಆಯುಕ್ತರು (ಗೈಡ್)ರವರು ಈ ಶಿಬಿರದಲ್ಲಿ ಚೆನ್ನಾಗಿ ಕಲಿತು ರಾಜ್ಯ, ರಾಷ್ಟ್ರ ಪ್ರಶಸ್ತಿ ಪಡೆಯಲೇಬೇಕು ಎಂದು ತಿಳಿಸಿದರು. ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಪಿ.ಎಲ್. ಸುರೇಶರಾಜು ಇವರು ನಿಮ್ಮಗಳಿಗೆ ಈ ವಾತಾವರಣದಲ್ಲಿ ಕಲಿಯುತ್ತಿರುವುದು ನಿಮ್ಮ ಪುಣ್ಯ. ತಾವುಗಳೆಲ್ಲ ಚೆನ್ನಾಗಿ ಕಲಿತು ಉತ್ತಮ ನಾಯಕತ್ವವನ್ನು ಬೆಳೆಸಿಕೊಳ್ಳಿ ಎಂದು ಹೇಳಿದರು. ಶ್ರೀ ಉಜ್ಜಿನಪ್ಪ ಹೆಚ್.ಕ್ಯೂ.ಸಿ.(ಸ್ಕೌಟ್ಸ್) ಇವರು, ತರಬೇತಿಯಿಲ್ಲದೆ ಯಾವ ಕೆಲಸಗಳು ಕೂಡ ಆಗುವುದಿಲ್ಲ. ತರಬೇತಿಯು ಮುಖ್ಯ ಹೇಗೆ ಎಂಬುದನ್ನು ವಿವರವಾಗಿ ಸ್ಕೌಟ್‌ಗಳಿಗೆ ತಿಳಿಸಿದರು. ಶ್ರೀ ಯರ್ರಿಸ್ವಾಮಿ, ಹೆಚ್.ಕ್ಯೂ.ಸಿ. (ಸ್ಕೌಟ್ಸ್) ಶಿಬಿರ ವಾಸದಿಂದ ಗುಣಮಟ್ಟದಲ್ಲಿ ಬೆಳವಣಿಗೆಯನ್ನು ಕಾಣುತ್ತೇವೆ ಎಂದರು. ಈ ಶಿಬಿರದಲ್ಲಿ 10 ಸ್ಕೌಟರ್ಸ್ ಹಾಗು 66 ಸ್ಕೌಟ್‌ಗಳು, ಸಹಾಯಕರು ಮತ್ತು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.

* ಜುಲೈ 7 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಆವರಣದಲ್ಲಿ ಜಿಲ್ಲಾ ಮಟ್ಟದ ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶವನ್ನು ಹಮ್ಮಿಕೊಳ್ಳಲಾಗಿತ್ತು. ಶ್ರೀ ಬಿ. ಗುರುಮೂರ್ತಿ, ಜಿಲ್ಲಾ ಸಂಘಟಕರು ಸರ್ವರನ್ನು ಸ್ವಾಗತಿಸಿದರು. ನಂತರ ದೈವಾಧೀನರಾದ ಶ್ರೀಮತಿ ಎಸ್.ಕೆ. ಪ್ರಭಾ ರಾಜ್ಯ ಜಂಟಿ ಕಾರ್ಯದರ್ಶಿಗಳು, ಶ್ರೀ ಸಿ.ಎಂ. ಶಿವಲಿಂಗಸ್ವಾಮಿ, ಕಬ್ ಮಾಸ್ಟರ್ ಇವರುಗಳಿಗೆ ಒಂದು ನಿಮಿಷ ಮೌನ ಪ್ರಾರ್ಥನೆಯೊಂದಿಗೆ ಶ್ರದ್ಧಾಂಜಲಿಯನ್ನು ಸಲ್ಲಿಸಲಾಯಿತು. ಶ್ರೀ ಸಿ.ಎನ್. ಮಹೇಶ್ ಎಲ್.ಟಿ., ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್) ಇವರು ಪ್ರಾಸ್ತಾವಿಕ ನುಡಿಯಲ್ಲಿ ಹಿಮಾಲಯ ವೃಕ್ಷ ಮಣಿಧಾರಕ ತರಬೇತಿಯ ಮೌಲ್ಯದ ಬಗ್ಗೆ ವಿವರಿಸಿದರು.

* ಸದ್ಗುರು ಸೇವಾ ಆಶ್ರಮದಲ್ಲಿ ನಡೆದ 3 ದಿನ ಸಮುದಾಯ ಸೇವಾ ಕಾರ್ಯಕ್ರಮದಲ್ಲಿ 110 ಸ್ಕೌಟ್ಸ್, 100 ಗೈಡ್ಸ್ ಮತ್ತು 25 ಸ್ಕೌಟರ್ಸ್-ಗೈಡರ್ಸ್‌ಗಳು ಹಾಗೂ ಜಿಲ್ಲಾ ಪದಾಧಿಕಾರಿಗಳು ಮತ್ತು ಜಿಲ್ಲಾ ಸಂಘಟಕರುಗಳು ಭಾಗವಹಿಸಿದ್ದರು.

## ದಕ್ಷಿಣ ಕನ್ನಡ

ಗ್ರಾಮೀಣ ಪರಿಸರದ ಪರಿಚಯವನ್ನು ನೀಡುವ ಕೆಸರುಗದ್ದೆ ಕ್ರೀಡಾಕೂಟ, ವನಮಹೋತ್ಸವ ಮತ್ತು ಭತ್ತದ ನಾಟಿ ಕಾರ್ಯಕ್ರಮವನ್ನು ಉಳ್ಳಾಲ ಸ್ಥಳೀಯ ಸಂಸ್ಥೆ ವತಿಯಿಂದ ಹಮ್ಮಿಕೊಳ್ಳಲಾಗಿತ್ತು.



ಕೋಣಾಜೆ ಸಮೀಪದ ಪೆರಂಡೆ ಎಂಬ ಗ್ರಾಮೀಣ ಪ್ರದೇಶದಲ್ಲಿ ನಡೆದ ಕಾರ್ಯಕ್ರಮದ ಉದ್ಘಾಟನಾ ಸಮಾರಂಭವು ಶ್ರೀಮತಿ ಮುತ್ತು ಶೆಟ್ಟಿ (ಕೃಷಿಕ ಮಹಿಳೆ) ಅವರ ಪ್ರಾರ್ಥನೆಯೊಂದಿಗೆ ಆರಂಭವಾಯ್ತು. ಉದ್ಯಮಿ ಶ್ರೀ ಸುದರ್ಶನ್ ಶೆಟ್ಟಿ ಅವರು ಉದ್ಘಾಟಿಸಿದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಕೋಶಾಧಿಕಾರಿ ಶ್ರೀ ವಾಸುದೇವ ಬೋಳೂರು, ಮಂಗಳೂರು ವಿ.ವಿ. ಜೀವಶಾಸ್ತ್ರ ವಿಭಾಗದ ಡಾ. ಪ್ರಶಾಂತ ನಾಯಕ್, ಮಂಗಳೂರು ದಕ್ಷಿಣ ವಲಯದ ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿ ಶ್ರೀ ಗುರುನಾಥ ಬಾಗೇವಾಡಿ, ಹರೇಕಳ ಶ್ರೀ ರಾಮಕೃಷ್ಣ ಪ್ರೌಢಶಾಲೆಯ ಮುಖ್ಯ ಶಿಕ್ಷಕ ಶ್ರೀ ರವೀಂದ್ರ ರೈ, ಕೃಷಿಕ ಶ್ರೀ ಸುದರ್ಶನ್ ಭಟ್, ಮಂಗಳ ಗಂಗೋತ್ರಿ ಜೆಸಿಐ ಅಧ್ಯಕ್ಷ ಶ್ರೀ ಬಾದಶಾ, ಯಾದವ ಶೆಟ್ಟಿ, ಶ್ರೀ ವಿಠಲ ಶೆಟ್ಟಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಎಂ.ಜಿ. ಕಜೆ ಅವರು ಸಭಾಧ್ಯಕ್ಷತೆ ವಹಿಸಿದ್ದರು. ಸ್ಕೌಟರ್ ಶ್ರೀ ತ್ಯಾಗಂ ಹರೇಕಳ ಪ್ರಾಸ್ತಾವಿಕ ಮಾತುಗಳೊಂದಿಗೆ ಎಲ್ಲರನ್ನೂ ಸ್ವಾಗತಿಸಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಮಝೀದ್ ಮಲಾರ್ ವಂದಿಸಿದರು. ಗೈಡ್ ಶ್ರೀಮತಿ ಗೀತಾ ಜುಡಿತ್ ಸಲ್ಡಾನ ಕಾರ್ಯಕ್ರಮ ನಿರ್ವಹಿಸಿದರು. ಇದೇ ಸಂದರ್ಭ ಪ್ರಗತಿ ಪರ ಕೃಷಿಕ ಸುದರ್ಶನ್ ಭಟ್ ಅವರನ್ನು ಸನ್ಮಾನಿಸಲಾಯಿತು.

ಸಭಾ ಕಾರ್ಯಕ್ರಮದ ನಂತರ ಪೆರಂಡೆ ಶ್ರೀ ಗೋಪಾಲಕೃಷ್ಣ ಮಂದಿರದ ಆವರಣದಲ್ಲಿ ಡಾ. ಪ್ರಶಾಂತ್ ನಾಯಕ್ ಗಿಡ ನೆಡುವುದರ ಮೂಲಕ ವನಮಹೋತ್ಸವಕ್ಕೆ ಚಾಲನೆ ನೀಡಿದರು. ಪೆರಂಡೆ ಆಸುಪಾಸಿನ ಗಿಡಗಳ ಆರೈಕೆ ಮಾಡಲು ಸ್ಕೌಟ್-ಗೈಡ್‌ಗಳಿಗೆ ಜವಾಬ್ದಾರಿ ನೀಡಲಾಯ್ತು. 10 ಶಾಲೆಗಳ 220 ಮಕ್ಕಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

* ಸೈಂಟ್ ಮೇರೀಸ್ ವಿದ್ಯಾಸಂಸ್ಥೆಯಲ್ಲಿ ವನಮಹೋತ್ಸವ ಕಾರ್ಯಕ್ರಮವು ಜುಲೈ 15 ರಂದು ನಡೆಯಿತು. ಅಧ್ಯಕ್ಷತೆ ವಹಿಸಿದ ವಿದ್ಯಾಸಂಸ್ಥೆಯ ಸಂಚಾಲಕರಾದ ವಂ.ಫಾ. ರೋನಾಲ್ಡ್ ಪಿಂಟೋ ಮಾತನಾಡಿ ನಾವು ಪರಿಸರವನ್ನು ಪ್ರೀತಿಸಿ ಸಂರಕ್ಷಿಸಬೇಕು ಎಂದರು. ಸಂಪನ್ಮೂಲ ವ್ಯಕ್ತಿಯಾಗಿ ಉಪ್ಪಿನಂಗಡಿ ಅರಣ್ಯಾಧಿಕಾರಿ ಶ್ರೀಮತಿ ಸಂಧ್ಯಾ ಮಾತನಾಡಿ ನೀರನ್ನು ಸ್ವಚ್ಛಗೊಳಿಸುವ ಕ್ರಿಯೆಯಲ್ಲಿ ಅರಣ್ಯದ ಮುಖ್ಯ ಪಾತ್ರ ಹಾಗೂ ನೀರಿನ ಮಹತ್ವದ ಬಗ್ಗೆ ತಿಳಿಸಿದರು. ನಂತರ ವಿದ್ಯಾರ್ಥಿಗಳಿಂದ ಪರಿಸರಕ್ಕೆ ಸಂಬಂಧಿಸಿದ ನೃತ್ಯ ರೂಪಕ ನಡೆಯಿತು. ಸ್ಕೌಟ್-ಗೈಡ್‌ಗಳು ಶಾಲಾ ಮೈದಾನದಲ್ಲಿ ಗಿಡ ನೆಡುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು.

* ಆಗಸ್ಟ್ 8 ರಂದು ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ, ಜಿಲ್ಲಾಡಳಿತ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಮಹಾನಗರ ಪಾಲಿಕೆ, ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರ, ಅರಣ್ಯ ಇಲಾಖೆ, ರಾಷ್ಟ್ರೀಯ ಸೇವಾ ಯೋಜನೆ,



ಮಂಗಳೂರು ವಿಶ್ವವಿದ್ಯಾಲಯ, ಭಾರತ್ ಸ್ಕೌಟ್ಸ್-ಗೈಡ್ಸ್, ದಕ್ಷಿಣ ಕನ್ನಡ ಜಿಲ್ಲೆ ಇವರ ಸಂಯುಕ್ತಾಶ್ರಯದಲ್ಲಿ ಮಂಗಳೂರು ಪುರಭವನದಲ್ಲಿ ಪ್ರಕೃತಿ ಸಂರಕ್ಷಣಾ ದಿನಾಚರಣೆ ಮತ್ತು ಜಿಲ್ಲಾ ಪರಿಸರ ಪ್ರಶಸ್ತಿ ಪ್ರದಾನ ಸಮಾರಂಭ-2017 ಕಾರ್ಯಕ್ರಮ ನಡೆಯಿತು. ಈ ಸಮಾರಂಭದ ಅಂಗವಾಗಿ ನಡೆಸಿದ ಕಾರ್ಯಕ್ರಮದಲ್ಲಿ ಜಿಲ್ಲೆಯಿಂದ ಒಟ್ಟು 150ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಹಾಗೂ ಸ್ಕೌಟರ್ಸ್-ಗೈಡರ್ಸ್ ಶಿಕ್ಷಕ ಸಮೇತ ಭಾಗವಹಿಸಿದರು. ಪ್ರಕೃತಿ ಸಂರಕ್ಷಣಾ ದಿನಾಚರಣೆ ಕಾರ್ಯಕ್ರಮವನ್ನು ಶ್ರೀ ಬಿ. ರಮಾನಾಥ್ ರೈ, ಅರಣ್ಯ, ಜೀವಶಾಸ್ತ್ರ ಮತ್ತು ಪರಿಸರ ಸಚಿವರು, ಕರ್ನಾಟಕ ಸರಕಾರ ಹಾಗು ದಕ್ಷಿಣ ಕನ್ನಡ ಉಸ್ತುವಾರಿ ಸಚಿವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಸ್ಕೌಟ್-ಗೈಡ್ಸ್‌ಗಳಿಗೆ ಸಾಂಕೇತಿವಾಗಿ ಗಿಡಗಳನ್ನು ನೀಡಿದರು.

ಕಾರ್ಯಕ್ರಮದಲ್ಲಿ ಜಿಲ್ಲೆಯ ಶಾಸಕರುಗಳು, ಇಲಾಖಾ ಅಧಿಕಾರಿಗಳು, ಅನೇಕ ಗಣ್ಯರು ಹಾಗು ದಕ್ಷಿಣ ಕನ್ನಡ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಅಧಿಕಾರಿಗಳು ಭಾಗವಹಿಸಿದ್ದರು.

* ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಉಳ್ಳಾಲ ವತಿಯಿಂದ ನಿರಂತರ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು ಆಗಸ್ಟ್ 5 ರಂದು ಅದರ ಉದ್ಘಾಟನೆಯನ್ನು ನೆರವೇರಿಸಲಾಯಿತು. ಸಂತ ಸೆಬಾಸ್ಟಿಯನ್ ಕನ್ನಡ ಮಾಧ್ಯಮ ಪ್ರೌಢಶಾಲೆ ಮತ್ತು ಹಿರಿಯ ಪ್ರಾಥಮಿಕ ಶಾಲೆಯ 218 ಮಕ್ಕಳು ಹಾಗೂ 15 ಶಿಕ್ಷಕರು ತೊಕ್ಕೊಟು ಬಸ್ ನಿಲ್ದಾಣ ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಉಳ್ಳಾಲ ಪುರಸಭೆಯ ಅಧ್ಯಕ್ಷ ಶ್ರೀ ಹುಸೇನ್ ಕುಂಞ ಮೋನು ಅವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಎಂ.ಜಿ. ಕಜೆ ಅವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಕಾಲೇಜಿನ ಪ್ರಾಂಶುಪಾಲ ವಂ.ಫಾ. ಎಡ್ವಿನ್ ಮಸ್ಕರೇಂಸ್ ಅವರು ಮಾತನಾಡಿ ಮಕ್ಕಳು ಎಳೆವಯಸ್ಸಿನಲ್ಲೇ ಶುಚಿತ್ವದ ಮಹತ್ವವನ್ನು ತಿಳಿದು ಸೇವಾ ಮನೋಭಾವನೆಯನ್ನು ಮೈಗೂಡಿಸಿಕೊಳ್ಳಬೇಕು. ಎಂದು ಹೇಳಿ, ಸ್ಕೌಟ್-ಗೈಡ್‌ಗಳ ಕಾರ್ಯವನ್ನು ಶ್ಲಾಘಿಸಿದರು. ತೊಕ್ಕೊಟು ಬಸ್ ನಿಲ್ದಾಣದ ಸುತ್ತಮುತ್ತ ಕಸ, ಕಡ್ಡಿ, ಪ್ಲಾಸ್ಟಿಕ್ ಹೆಕ್ಕಿ ಸ್ವಚ್ಛಗೊಳಿಸಲಾಯಿತು.

* ಜುಲೈ 26 ರಂದು ಪುತ್ತೂರು ತಾಲೂಕಿನ ನರಿಮೊಗರು ಗ್ರಾಮದ ಸಾಂದೀಪನಿ ಗ್ರಾಮೀಣ ವಿದ್ಯಾಸಂಸ್ಥೆಯಲ್ಲಿ ಕಾರ್ಗಿಲ್ ವಿಜಯ್ ದಿವಸ್ ದಿನವನ್ನು ಭಾರತ್ ಸ್ಕೌಟ್ಸ್-ಗೈಡ್ಸ್ ವತಿಯಿಂದ ಆಚರಿಸಲಾಯಿತು.



ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಶಾಲಾ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಜಯಮಾಲಾ ವಿ.ಎನ್. ರವರು ಮಾತನಾಡುತ್ತಾ ಭಾರತೀಯ ಸೇನೆಯ ತ್ಯಾಗ ಬಲಿದಾನಗಳಿಂದಾಗಿ ಇಂದು ನಾವು ನೆಮ್ಮದಿಯಿಂದ ಬದುಕಲು ಸಾಧ್ಯವಾಗಿದೆ ಎಂದು ತಿಳಿಸುತ್ತಾ ಭಾರತೀಯ ಸೇನೆಗೆ ಗೌರವಾರ್ಪಣೆ ಮಾಡಿದರು.

ಈ ಸಂದರ್ಭದಲ್ಲಿ ಕಾರ್ಗಿಲ್ ಹೋರಾಟದ ನೆನಪಿಗಾಗಿ ಕಾರ್ಗಿಲ್ ಯುದ್ಧದ ಸಣ್ಣ ವೀಡಿಯೋ ತುಣುಕನ್ನು ಸ್ಕೌಟ್-ಗೈಡ್‌ಗಳಿಗೆ ತೋರಿಸಲಾಯಿತು. ಕಾರ್ಯಕ್ರಮದ ನಿರೂಪಣೆಯನ್ನು ಶ್ರೀ ಶ್ರೀಪ್ರಸಾದ್ .ಎನ್ ಇವರು ನಡೆಸಿಕೊಟ್ಟರು. ಈ ಸಂದರ್ಭದಲ್ಲಿ ಶಾಲಾ ಶಿಕ್ಷಕ ವೃಂದದವರು, ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ನವರು ಉಪಸ್ಥಿತರಿದ್ದರು.



ದಾವಣಗೆರೆ

* ಆಗಸ್ಟ್ 8 ರಂದು ದಾವಣಗೆರೆ ಜಿಲ್ಲಾ ಸಂಸ್ಥೆ ವತಿಯಿಂದ ರಕ್ಷಾ ಬಂಧನ ಕಾರ್ಯಕ್ರಮವನ್ನು ಧ.ರಾ.ಮ ಸ್ಕೌಟ್ ಭವನದ ಆವರಣದಲ್ಲಿ ಆಯೋಜಿಸಲಾಗಿತ್ತು. ಸದರಿ ಕಾರ್ಯಕ್ರಮದಲ್ಲಿ ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ಎನ್.ಡಿ. ತಮ್ಮಣ್ಣನವರ್ ಜಿಲ್ಲಾ ತರಬೇತಿ ಆಯುಕ್ತರು ಸ್ಕೌಟ್ಸ್, ಶ್ರೀ ಎಂ. ಅಶೋಕ್ ಕುಮಾರ್ ಜಿಲ್ಲಾ ಸಹಾಯಕ ಆಯುಕ್ತರು ಸ್ಕೌಟ್ಸ್, ಶ್ರೀಮತಿ ಶಿಲ್ಪಾ, ಜಿಲ್ಲಾ ಸಹಾಯಕ ಆಯುಕ್ತರು, ಗೈಡ್ಸ್, ಶ್ರೀಮತಿ ಶಹನಾಜ್ ಮಂಗಳಗಟ್ಟಿ ಜಿಲ್ಲಾ ಸಹಾಯಕ ಆಯುಕ್ತರು ಗೈಡ್ಸ್ ಉಪಸ್ಥಿತರಿದ್ದರು. ಮಕ್ಕಳಿಗೆ ರಕ್ಷಾ ಬಂಧನದ ಮಹತ್ವವನ್ನು ತಿಳಿಸಿದರು. ವಿವಿಧ ಶಾಲೆಯ 100 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಆಗಸ್ಟ್ 12 ರಂದು ದಾವಣಗೆರೆ ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ಮಟ್ಟದ ದೇಶಭಕ್ತಿ ಗೀತೆಗಳ ಗೀತಗಾಯನ ಸ್ಪರ್ಧೆಯನ್ನು ಆಯೋಜಿಸಲಾಗಿತ್ತು. ಸದರಿ ಸ್ಪರ್ಧೆಯಲ್ಲಿ ದಾವಣಗೆರೆ ದಕ್ಷಿಣ ವಲಯ, ಜಗಳೂರು ಮತ್ತು ಹೊನ್ನಾಳಿ ತಾಲ್ಲೂಕು ಸ್ಥಳೀಯ ಸಂಸ್ಥೆಗಳಿಂದ ಆಯ್ದು 15 ತಂಡಗಳು ಭಾಗವಹಿಸಿದ್ದವು. ಇದರಲ್ಲಿ ಪ್ರಥಮ ಬಹುಮಾನವನ್ನು ಪಿ.ಎಸ್.ಈ.ಎಂ.ಆರ್. ಶಾಲೆ ಸ್ಕೌಟ್ಸ್ ಗೈಡ್ಸ್ ತಂಡಗಳು ಪಡೆದಿರುತ್ತವೆ. ಸ್ಕೌಟ್ ವಿಭಾಗದ ಎರಡನೇ ಬಹುಮಾನವನ್ನು ಎನ್.ಎಂ.ಕೆ. ಪ್ರೌಢಶಾಲೆ, ಜಗಳೂರಿನ ಸ್ಕೌಟ್ಸ್-ಗೈಡ್ಸ್‌ಗಳು ಪಡೆದರು. ಸ್ಪರ್ಧೆಯ ತೀರ್ಪುಗಾರರಾಗಿ ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ ಜಿಲ್ಲಾ ಗೈಡ್ ಆಯುಕ್ತರು, ಶ್ರೀಮತಿ ಶಾಂತಾ ಎಸ್.ಯಾವಲಗ ಸಂಪಾದಕರು ಜಿಲ್ಲಾ ವಾರ್ತಾ ಪತ್ರಿಕೆ ಮತ್ತು ಶ್ರೀಮತಿ ಶಶಿಕಲಾ ಜಿಲ್ಲಾ ಸ್ಥಾನಿಕ ಆಯುಕ್ತರು ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಮತ್ತು ಸ್ಕೌಟರ್ಸ್-ಗೈಡರ್ಸ್‌ಗಳು ಉಪಸ್ಥಿತರಿದ್ದರು.





* ಆಗಸ್ಟ್ 15 ರಂದು ಧ.ರಾ.ಮ. ಸ್ಕೌಟ್ ಭವನದ ಆವರಣದಲ್ಲಿ ಜಿಲ್ಲಾ ಸಂಸ್ಥೆ ವತಿಯಿಂದ 71ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಧ್ವಜಾರೋಹಣದೊಂದಿಗೆ ಆಚರಿಸಲಾಯಿತು. ಶ್ರೀ ಮಹಮ್ಮದ್ ವಾಸಿಲ್ ಜಿಲ್ಲಾ ಅಧ್ಯಕ್ಷರು. ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ ಜಿಲ್ಲಾ ಮುಖ್ಯ ಆಯುಕ್ತರು. ಶ್ರೀ ಎ.ಪಿ. ಷಡಾಕ್ಷರಪ್ಪ ಜಿಲ್ಲಾ ಸ್ಕೌಟ್ ಆಯುಕ್ತರು ಹಾಗೂ ಜಿಲ್ಲಾ ಸಂಸ್ಥೆ ಎಲ್ಲಾ ಪದಾಧಿಕಾರಿಗಳು ವಿವಿಧ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ವಿವಿಧ ಕಾಲೇಜಿನ ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

* ಆಗಸ್ಟ್ 15 ರಂದು ಸ್ವಾತಂತ್ರ್ಯ ದಿನಾಚರಣೆ ಅಂಗವಾಗಿ ರೋವರ್ಸ್-ರೇಂಜರ್ಸ್‌ಗಳಿಂದ ನಗರದ ಹಳೇ ಬಸ್ ನಿಲ್ದಾಣದಲ್ಲಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ನಗರದ ವಿವಿಧ ಕಾಲೇಜಿನ ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ಕಾರ್ಯಕ್ರಮದ ನೇತೃತ್ವವನ್ನು ಡಾ॥ ರಾಕೇಶ್ ರೋವರ್ ಸ್ಕೌಟ್ ಲೀಡರ್, ಶ್ರೀ ಎಸ್. ಶಿವಣ್ಣ ಮತ್ತು ಕುಮಾರಿ ಪ್ರಿಯಾಂಕ ಹೆಚ್.ಎಂ. ಜಿಲ್ಲಾ ಸಂಘಟಕರು ವಹಿಸಿದ್ದರು.



* ಆಗಸ್ಟ್ 15 ರಂದು ಜಿಲ್ಲಾ ಕ್ರೀಡಾಂಗಣದಲ್ಲಿ ಸ್ವಾತಂತ್ರ್ಯ ದಿನಾಚರಣೆ ಅಂಗವಾಗಿ ನಡೆದ ಪಥಸಂಚಲನ ಕಾರ್ಯಕ್ರಮದಲ್ಲಿ ದಾವಣಗೆರೆ ಜಿಲ್ಲಾ ಸಂಸ್ಥೆ ವತಿಯಿಂದ ಪಿ.ಎಸ್.ಎಸ್.ಇ.ಎಂ.ಆರ್. ಶಾಲೆಯ ಸ್ಕೌಟ್ಸ್‌ಗಳು ಮತ್ತು ಸೇಂಟ್ ಪಾಲ್ಸ್ ಕಾನ್ವೆಂಟ್ ಶಾಲೆಯ ಗೈಡ್ಸ್ ಗಳು ತೃತೀಯ ಬಹುಮಾನ ಪಡೆದಿರುತ್ತಾರೆ.

* ಭಾರತೀಯ ಕಲಾ ಸಾಂಸ್ಕೃತಿಕ ಅಕಾಡೆಮಿಯ ಕರ್ನಾಟಕ ಜ್ಯೋತಿ ರಾಜ್ಯಪ್ರಶಸ್ತಿಯನ್ನು ದಾವಣಗೆರೆ ಜಿಲ್ಲೆಯ ಎ.ಆರ್.ಎಂ. ಪ್ರಥಮ ದರ್ಜೆ ಕಾಲೇಜಿನ ರೋವರ್ ಸ್ಕೌಟ್ ಲೀಡರ್ ಆದ ಡಾ॥ ರಾಕೇಶ್, ಬಿ.ಸಿ. ಮತ್ತು ರೇಂಜರ್ ಲೀಡರ್ ಡಾ॥ ಮಧುಮಾಲತಿ ಇವರು ಆಗಸ್ಟ್ 1 ರಂದು ಪಡೆದಿರುತ್ತಾರೆ.

## ಧಾರವಾಡ

ಜುಲೈ 14 ರಿಂದ 20ರ ವರೆಗೆ ಜಿಲ್ಲಾ ಮಟ್ಟದ ಸ್ಕೌಟ್ ಮಾಸ್ಟರರ ಮೂಲ ತರಬೇತಿ ಶಿಬಿರವನ್ನು ಸಸ್ಯ ಚೇತನ ಜಿಲ್ಲಾ ತರಬೇತಿ ಕೇಂದ್ರದಲ್ಲಿ ನಡೆಸಲಾಯಿತು. ಶ್ರೀ ಸಿ.ಎಂ. ಕೆಂಗಾರ, ಶಿಬಿರದ ನಾಯಕರಾಗಿ ಸೇವೆ ಸಲ್ಲಿಸಿದರು. ಧಾರವಾಡ ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ 39 ಶಿಕ್ಷಕರು ಭಾಗವಹಿಸಿದರು. ಶ್ರೀ ಎಂ.ಎಂ. ಲೋಂಡೆ, ಶ್ರೀ ಬಿ.ಕೆ. ಪಾಟೀಲ, ಶ್ರೀ ಡಿ.ಕೆ. ಪಾಟೀಲ ಶ್ರೀ ಡಿ.ಕೆ. ಟೆಂಕಪ್ಪನವರ, ಶ್ರೀ ಎನ್. ಎಚ್. ದೇಸಾಯಿ, ಸಹನಾಯಕರಾಗಿ ಸೇವೆ ಸಲ್ಲಿಸಿದರು. ಜುಲೈ 20 ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ವಿ.ವಿ. ಕಟ್ಟಿಯವರು ಮಾತನಾಡಿ ಶಿಕ್ಷಕರಿಗೆ ಶುಭ ಹಾರೈಸಿದರು. ಸಭೆಯಲ್ಲಿ ಶ್ರೀ ಎಸ್. ಆಯ್ ನೇಕಾರ ಶ್ರೀ ಎಸ್.ವಿ. ಮೊರಬ ಮಾತನಾಡಿದರು.

* ಜುಲೈ 14 ರಿಂದ 20 ರ ವರೆಗೆ ಜಿಲ್ಲಾ ಮಟ್ಟದ ಗೈಡ್ ಕ್ಯಾಪ್ಟನ್ನರ ಮೂಲ ತರಬೇತಿ ಶಿಬಿರವನ್ನು ನಡೆಸಲಾಯಿತು. ಧಾರವಾಡ ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ 45 ಶಿಕ್ಷಕಿಯರು ಆಸಕ್ತಿಯಿಂದ ಭಾಗವಹಿಸಿದರು. ಶ್ರೀಮತಿ ಪ್ರಭಾ ಲೋಂಡೆ ಶಿಬಿರದ ನಾಯಕರಾಗಿ ಸೇವೆ ಸಲ್ಲಿಸಿದರು. ಶ್ರೀಮತಿ ಎಸ್.ಎ ಮನಿಯಾರ, ಶ್ರೀಮತಿ ಗೀತಾ ಟೋಣಪಿ, ಶ್ರೀಮತಿ ಆರ್. ಎನ್. ಜೊಂಜಾಳೆ ಸಹಾಯಕರಾಗಿ ಸೇವೆ ಸಲ್ಲಿಸಿದರು. ದಿನಾಂಕ 20 ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ವಿ.ವಿ. ಕಟ್ಟಿ, ಶ್ರೀ ಎಸ್. ಐ. ನೇಕಾರ, ಶ್ರೀ ಎಸ್.ವಿ ಮೊರಬ ಭಾಗವಹಿಸಿ ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು.

## Congratulations



Prof. A.S. Chandrashekhar, former District Commissioner(S) of Shivamogga District & former State Council Member has been unanimously chosen as Rotary Dist. Representative for Council on Legislative and Council on Resolution for the term from 2017 to 2020.



Siddharth Athreyas, a Rastrapathi Scout of 2014, Secured a seat in BMS College of Engineering, Basavanagudi, Bengaluru, Under Scout/Guide Quota. He belongs D.P.S. Scout Troop.

* ಆಗಸ್ಟ್ 3 ರಂದು ಸರಕಾರಿ ಪದವಿ ಪೂರ್ವ ಕಾಲೇಜು ಗದಗದ ರೋವರ್ಸ್‌ಗಳಿಂದ ಒಂದು ದಿನದ ಶ್ರಮದಾನ ಶಿಬಿರವನ್ನು ಸರಕಾರಿ ಪದವಿ ಪೂರ್ವ ಕಾಲೇಜಿನ ಆವರಣದಲ್ಲಿ ನಡೆಸಲಾಯಿತು. ಶ್ರೀ ಜಿ.ಹೆಚ್. ಪೂಜಾರ ಜಿಲ್ಲಾ ಕಾರ್ಯದರ್ಶಿ, ಶ್ರೀ ಕೆ.ಪಿ. ಕಾಜಗಾರ್, ಎ.ಎಸ್.ಓ.ಸಿ, ಶ್ರೀ ಎ.ಎಸ್. ಶಿವುಕುಮಾರ ಹಾಗು ಕಾಲೇಜಿನ ರೋವರ್ಸ್‌ಗಳು ಭಾಗವಹಿಸಿದ್ದರು.



* ಆಗಸ್ಟ್ 5 ರಂದು ಸರಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಎನ್.ಎಸ್.ಎಸ್. ಸೇವಾದಳ, ರೋವರ್ ಕ್ರ್ಯೂಗಳಿಂದ ಸಸಿ ನೆಡುವ ಕಾರ್ಯಕ್ರಮ ನಡೆಸಲಾಯಿತು. ಎನ್.ಎಸ್.ಎಸ್ ಮುಖ್ಯಸ್ಥ ಶ್ರೀ ವೇಲ್ಲಾ, ಸೇವಾದಳದ ಶ್ರೀ ಗಿರಿ ತಿಮ್ಮಣ್ಣ, ಸ್ಕೌಟರ್ ರೋವರ್ ಕ್ರ್ಯೂ ಆರ್.ಎಸ್.ಎಲ್. ಶ್ರೀ ಕೆ.ಪಿ. ಕಾಜಗಾರ್, ಶ್ರೀ ಜಿ.ಹೆಚ್. ಪೂಜಾರ ರೋವರ್ಸ್‌ಗಳು ಭಾಗವಹಿಸಿದ್ದರು.

"ಹಾಲು ಕರೆಯುವವನು ಆಕಳ ಬುಡದಲ್ಲೇ ಕುಳಿತುಕೊಳ್ಳಬೇಕು. ವಿನೀತನಾಗಿ ಬದುಕುವುದನ್ನು ಬಾಳಲ್ಲಿ ರೂಡಿಸಿಕೊಳ್ಳಬೇಕು ಅಂದಾಗ ಮಾತ್ರ ಸಾರ್ಥಕ ಬದುಕನ್ನು ಕಟ್ಟಲು ಸಾಧ್ಯವಾಗುತ್ತದೆ" ಎಂದು ಖ್ಯಾತ ಸಾಹಿತಿ, ವಿಶ್ರಾಂತ ಪ್ರಾಚಾರ್ಯರಾದ ಶ್ರೀ ಚಂದ್ರಶೇಖರ ವಸ್ತ್ರದ ಅವರು ನುಡಿದರು.

ಇನ್ನೋರ್ವ ಅತಿಥಿಗಳಾದ ಜಿಲ್ಲಾ ಸ್ಕೌಟ್-ಗೈಡ್ ಕಾರ್ಯದರ್ಶಿಗಳಾದ ಶ್ರೀ ಪೂಜಾರ ಅವರು ಇಂತಹ ಘಟಕಗಳು ಕ್ರಿಯಾಶೀಲವಾಗಿ ನಡೆಯಲಿ ಎಂದು ಹಾರೈಸುತ್ತಾ, ಕಾಲೇಜಿನ ಬಗ್ಗೆ ಅಭಿಮಾನವನ್ನು ವ್ಯಕ್ತಪಡಿಸಿದರು.



ಭಾರತ ಸೇವಾದಳದ ಸಂಚಾಲಕರಾದ ಶ್ರೀ ಬಿ.ವಿ. ಸಜ್ಜನರ ಸ್ವಾಗತಿಸಿದರು. ಸ್ವಾಮಿ ವಿವೇಕಾನಂದ ರೋವರ್ ಘಟಕದ ಮುಖ್ಯಸ್ಥರಾದ ಶ್ರೀ ಕೆ.ಪಿ. ಕಾಜಗಾರ ಅವರು ಪ್ರಾಸ್ತಾವಿಕ ನುಡಿಗಳಲ್ಲಿ ಚರಿತ್ರೆ ಮತ್ತು ಚಾರಿತ್ರ ನಿರ್ಮಾಣದಲ್ಲಿ ಇಂತಹ ಘಟಕಗಳು ಕ್ರಿಯಾಶೀಲವಾಗಿ ನಡೆಯಲಿ ಎಂದು ಹಾರೈಸುತ್ತಾ, ಕಾಲೇಜಿನ ಬಗ್ಗೆ ಅಭಿಮಾನವನ್ನು ವ್ಯಕ್ತಪಡಿಸಿದರು. ಇದೇ ಅವಧಿಯಲ್ಲಿ ಬಡ ಮತ್ತು ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ಕ್ಷೇಮಾಭಿವೃದ್ಧಿ ನಿಧಿಯಿಂದ ಪುಸ್ತಕಗಳನ್ನು ಖರೀದಿಸಿ ವಿತರಿಸಲಾಯಿತು. ಎನ್.ಎಸ್.ಎಸ್. ಸಂಯೋಜಕರು ಶ್ರೀ ಎಂ.ಎಸ್. ಮುಲ್ಲಾ ಅವರು ವಂದನಾರ್ಪಣೆ ಮಾಡಿದರು. ಕು॥ ಶ್ರೇಯಾ ಜಮಾದಾರ ಮತ್ತು ಕು॥ ಹಡಪದ ಅವರು ಕಾರ್ಯಕ್ರಮ ನಿರೂಪಿಸಿದರು.

* ಆಗಸ್ಟ್ 15 ರಂದು ಹೊಸಹಳ್ಳಿಯ ಶ್ರೀ ಜಗದ್ಗುರು ಬೂದೀಶ್ವರ ವಿದ್ಯಾಪೀಠದಲ್ಲಿ ಸ್ವಾತಂತ್ರ್ಯೋತ್ಸವವನ್ನು ಹಮ್ಮಿಕೊಳ್ಳಲಾಗಿತ್ತು. ಶಾಲೆಯ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ ಬುಲ್, ಹಾಸ್ಟೆಲ್ ಹಾಗೂ ಸ್ಕೂಲ್ ಟ್ರೂಪ್‌ಗಳು ಪಥ ಸಂಚಲನದಲ್ಲಿ ಭಾಗವಹಿಸಿದ್ದರು. ಸ್ಕೌಟ್‌ಗಳು ವಂದೇಮಾತರಂ ದೇಶಭಕ್ತಿ ಗೀತೆಗೆ ನೃತ್ಯ ಮಾಡಿದರು. ಗೈಡ್ಸ್‌ಗಳು ಲೆಜಿಮ್ಮಿನಲ್ಲಿ ವ್ಯಾಯಾಮ ಮಾಡಿದರು. ಪೂಜ್ಯಶ್ರೀಗಳು ಸ್ಕೌಟ್-ಗೈಡ್ ಶಿಸ್ತಿನ ಎರಡು ಕಣ್ಣುಗಳು ಇದ್ದಂತೆ ಎಂದರು. ಸ್ಕೌಟ್-ಗೈಡ್‌ಗಳು ಅತೀ ಅವಶ್ಯ ಎಂದು ಆಡಳಿತಾಧಿಕಾರಿಗಳು ತಿಳಿಸಿದರು. ಶಾಲೆಯ ಪ್ರಾಚಾರ್ಯರು ಸ್ವಾಗತಿಸಿದರು. ಮುಖ್ಯೋಪಾಧ್ಯಾಯರು ವಂದಿಸಿದರು.

ಆಗಸ್ಟ್ 1 ರಂದು "ಅಬ್ದುಲ್ ಕಲಾಂ ಸ್ಕೌಟ್ಸ್" ಟ್ರೂಪ್, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಪೇಟೆ ಬಾಣಾವರ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆಯಲ್ಲಿ ಗ್ರಾಮ ಸ್ವಚ್ಛತಾ ಕಾರ್ಯಕ್ರಮ ಮತ್ತು ಅದರ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಮುಖ್ಯೋಪಾಧ್ಯಾಯರಾದ ಶ್ರೀಮತಿ ಗಿರಿಜಮ್ಮ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಸ್ಕೌಟ್ ಮಾಸ್ಟರ್ ಶ್ರೀ ಸತೀಶ್ ಕೆ.ಎಂ. ಇವರ ನೇತೃತ್ವದಲ್ಲಿ ಕಾರ್ಯಕ್ರಮ ನಡೆಯಿತು. ಎಲ್ಲಾ ಸಹ ಶಿಕ್ಷಕರು ಮತ್ತು ಹಿರಿಯ ವಿದ್ಯಾರ್ಥಿ ಸಂಘದ ಸದಸ್ಯರು ಪಾಲ್ಗೊಂಡಿದ್ದರು.

* ಆಗಸ್ಟ್ 12 ರಂದು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಮುದಾಯ ಭವನದಲ್ಲಿ ಜಿಲ್ಲಾ ಮಟ್ಟದ ಗೀತ ಗಾಯನ ಸ್ಪರ್ಧೆ ಆಯೋಜಿಸಲಾಗಿತ್ತು. ಈ ಸಂದರ್ಭದಲ್ಲಿ ಜಿಲ್ಲೆಯ ವಿವಿಧ ಶಾಲೆಗಳಿಂದ ಹತ್ತು ಸ್ಕೌಟ್ಸ್-ಗೈಡ್ಸ್ ತಂಡಗಳು ಭಾಗವಹಿಸಿದ್ದವು. ಈ ಕಾರ್ಯಕ್ರಮದಲ್ಲಿ ಅಧ್ಯಕ್ಷತೆ ವಹಿಸಿ ಮಾತನಾಡಿದ ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಪ್ರತಿ ಮಕ್ಕಳ ಹೃದಯದಲ್ಲಿ ದೇಶಾಭಿಮಾನ ಹಾಗೂ ರಾಷ್ಟ್ರೀಯ ಭಾವೈಕ್ಯತೆ ಮೂಡಿಸಲು ಪ್ರತಿಯೊಬ್ಬರು ಶ್ರಮಿಸಬೇಕೆಂದು ಕರೆ ನೀಡಿದರು.



ಈ ಗೀತ ಗಾಯನ ಶಿಬಿರದಲ್ಲಿ ಸಕಲೇಶಪುರ ರೋಟರಿ ಶಾಲೆಯು ಗೈಡ್ಸ್ ವಿಭಾಗದಲ್ಲಿ ಪ್ರಥಮ ಸ್ಥಾನ ಹಾಗು ಚನ್ನರಾಯಪಟ್ಟಣ, ಜ್ಞಾನಸಾಗರ ಇಂಟರ್ ನ್ಯಾಷನಲ್ ಪಬ್ಲಿಕ್ ಸ್ಕೂಲ್‌ನ ಸ್ಕೌಟ್ಸ್ ವಿಭಾಗ ಮಕ್ಕಳು ದ್ವಿತೀಯ ಸ್ಥಾನ ಪಡೆದು ರಾಜ್ಯ ಮಟ್ಟಕ್ಕೆ ಆಯ್ಕೆಯಾಗಿರುತ್ತಾರೆ. ಮುಖ್ಯ ಅತಿಥಿಗಳಾಗಿ ಮಾತನಾಡಿದ ಲಯನ್ಸ್ ಅಧ್ಯಕ್ಷ ಶ್ರೀ ಬಿ. ಸೋಮೇಶ್, ದೇಶದ ಭವಿಷ್ಯವಾಗಿರುವ ಯುವ ಜನರಲ್ಲಿ ಮಾನವೀಯ ಮೌಲ್ಯ, ಸಮುದಾಯ ಸೇವೆ, ಶಿಸ್ತು ಹಾಗೂ ರಾಷ್ಟ್ರಪ್ರೇಮವನ್ನು ಹೆಚ್ಚಿಸುವಂತಹ ವಿವಿಧ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಮಕ್ಕಳನ್ನು ದೇಶದ ಯುವ ಸಂಪತ್ತಾಗಿ ರೂಪಿಸುವ ಹಾಗೂ ಪ್ರತಿಭೆಯನ್ನು ಹೊರ ಹೊಮ್ಮಿಸುವ ಹೊಣೆ ನಮ್ಮೆಲ್ಲರದಾಗಿದೆ ಎಂದರು.

ಜಿಲ್ಲಾ ಮುಖ್ಯ ಆಯುಕ್ತ ಡಾ. ವೈ.ಎಸ್. ವೀರಭದ್ರಪ್ಪ, ಗೈಡ್ಸ್ ಆಯುಕ್ತೆ, ಶ್ರೀಮತಿ ಗಿರಿಜಾಂಬಿಕ ಎಂ.ಬಿ., ಜಿಲ್ಲಾ ಕಾರ್ಯದರ್ಶಿ ಮುತ್ತೇಗೌಡ, ಡಿಟಿಸಿ., ಶ್ರೀ ಎಂ.ಎಸ್. ಪ್ರಕಾಶ್, ತಾಲ್ಲೂಕ್ ಕಾರ್ಯದರ್ಶಿ ಶ್ರೀಮತಿ ವೈ.ಡಿ. ಪದ್ಮ, ಲಯನ್ಸ್ ಕ್ಲಬ್ ಕಾರ್ಯದರ್ಶಿ ಶ್ರೀ ಶಿವಸ್ವಾಮಿ, ಲಯನೆಸ್ ಅಧ್ಯಕ್ಷೆ ಶ್ರೀಮತಿ ಮಾಲತಿ ಹೆಗ್ಗಡೆ, ಖಜಾಂಚಿ, ಶ್ರೀಮತಿ ರೂಪ ಆನಂದ್, ಕೇಂದ್ರ ಸ್ಥಾನಿಕ ಆಯುಕ್ತ ಶ್ರೀ ರಾಮಲಿಂಗಾಚಾರ್ ಹಾಗೂ ಸ್ಕೌಟರ್-ಗೈಡರ್ ಉಪಸ್ಥಿತರಿದ್ದರು. ವಿಜೇತರಿಗೆ ಲಯನ್ಸ್ ಕ್ಲಬ್, ಲಯನೆಸ್ ಕ್ಲಬ್ ವತಿಯಿಂದ ಬಹುಮಾನ ನೀಡಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ ಸ್ವಾಗತಿಸಿ, ಜಿಲ್ಲಾ ತರಬೇತಿ ಆಯುಕ್ತ ಶ್ರೀ ಎಂ.ಎಸ್. ಪ್ರಕಾಶ್ ನಿರೂಪಿಸಿದರು.



* ಆಗಸ್ಟ್ 15 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಹಾಸನದಲ್ಲಿ 71ನೇ ಸ್ವಾತಂತ್ರ್ಯೋತ್ಸವವನ್ನು ಆಚರಿಸಲಾಯಿತು. ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ, ಜಿಲ್ಲಾ ಸಹಾಯಕ ಕಾರ್ಯದರ್ಶಿ ಶ್ರೀ ಆರ್.ಜಿ. ಗಿರೀಶ್ ಹಾಗೂ ವಿವಿಧ ಶಾಲೆಯಿಂದ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಭಾಗವಹಿಸಿದ್ದರು.

ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದಲ್ಲಿ 200 ಸ್ಕೌಟ್ಸ್, 100 ಗೈಡ್ಸ್ ಭಾಗವಹಿಸಿದ್ದರು. ಶ್ರೀ ಮುತ್ತೇಗೌಡ ಜಿಲ್ಲಾ ಕಾರ್ಯದರ್ಶಿ ನಾಯಕರಾಗಿದ್ದರು. ಆದಿಚುಂಚನಗಿರಿ ಇಂಗ್ಲೀಷ್ ಶಾಲೆಯ ಸ್ಕೌಟ್ಸ್ ಪಥಸಂಚಲನದಲ್ಲಿ ಪ್ರಥಮ ಬಹುಮಾನವನ್ನುಗಳಿಸಿ ರಾಜ್ಯ ಪಶುಸಂಗೋಪನ ಸಚಿವರು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಎ. ಮಂಜುರವರಿಂದ ಸ್ವೀಕರಿಸಿದರು.

* ಆಗಸ್ಟ್ 6 ರಂದು ಹಾಸನ ತಾಲ್ಲೂಕಿನ ಕೋರಮಂಗಲ ಗ್ರಾಮದ ಭದ್ರಕಾಳಿ ದೇವಾಲಯದ ಆವರಣದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್, ಏಕಲವ್ಯ ರೋವರ್ ಮುಕ್ತದಳದ 25 ರೋವರ್ಸ್-ರೇಂಜರ್ಸ್ ಹಾಗೂ ರಾಜ್ಯ ರೈತಹಿತ ರಕ್ಷಣಾ ಸಮಿತಿ ವತಿಯಿಂದ ವಿವಿಧ ರೀತಿಯ 200 ಸಸಿಗಳನ್ನು ನೆಡಲಾಯಿತು. ಏಕಲವ್ಯ ರೋವರ್ ಮುಕ್ತದಳಧ ನಾಯಕ ಶ್ರೀ ಆರ್.ಜಿ. ಗಿರೀಶ್ ಹಾಗೂ ಭಾ.ಸ್ಕೌ-ಗೈ ಜಿಲ್ಲಾ ಸಂಸ್ಥೆಯ ಜಂಟಿಕಾರ್ಯದರ್ಶಿ ಶ್ರೀಮತಿ ಹೆಚ್.ಜಿ. ಕಾಂಚನಮಾಲಾ ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

* ಆಗಸ್ಟ್ 13 ರಂದು ರೋವರ್ ಮುಕ್ತದಳದ ರೋವರ್ಸ್ - ಹಾಸನ ಜಿಲ್ಲೆಯ ವಿವಿದ ಕಾಲೇಜಿನ ರೋವರ್ಸ್/ರೇಂಜರ್ಸ್, ಒಟ್ಟು 30 ಮಂದಿ. ವೈ.ಆರ್.ಎಸ್. ಫೌಂಡೇಷನ್ ಅಧ್ಯಕ್ಷರಾದ ಶ್ರೀ ರಮೇಶ್, ಲಯನ್ಸ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಸೋಮೇಶ್, ಕಾರ್ಯದರ್ಶಿ, ಲಯನೆಸ್ ಸಂಸ್ಥೆಯ ಅಧ್ಯಕ್ಷಣಿ, ಮಾಜಿ ಅಧ್ಯಕ್ಷರು, ಪದಾಧಿಕಾರಿಗಳು ಪಾಲ್ಗೊಂಡು ಹಾಸನ ತಾಲ್ಲೂಕಿನ ತಣ್ಣೀರ ಹಳ್ಳಿ, ಶ್ರೀ ರಾಮದೇವರಪುರ, ಕಾರುಘಟ್ಟ ಈ ಮೂರು ಗ್ರಾಮಗಳಲ್ಲಿ 300 ಕ್ಕೂ ಹೆಚ್ಚು ಸಸಿಗಳನ್ನು ನೆಟ್ಟರು. ಗಿಡ ನೆಡುವ ಕಾರ್ಯಕ್ರಮದ ನೇತೃತ್ವವನ್ನು ಶ್ರೀ ಆರ್.ಜಿ. ಗಿರೀಶ್ ಹಾಗೂ ಶ್ರೀಮತಿ ಹೆಚ್.ಜಿ. ಕಾಂಚನ ಮಾಲಾ ವಹಿಸಿದ್ದರು.

* ಭಾರತ್ ಸ್ಕೌಟ್ಸ್-ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ತೃತೀಯ ಚರಣ್ ಕಬ್ಸ್, ಸುವರ್ಣ ಪಂಖ್ ಬುಲ್ ಬುಲ್ಸ್ ತೃತೀಯ ಸೋಪಾನ ಸ್ಕೌಟ್ಸ್-ಗೈಡ್ಸ್ ಪರೀಕ್ಷಾ ಶಿಬಿರವು ಹಾಸನ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಲ್ಲಿ ಹಮ್ಮಿಕೊಳ್ಳಾಗಿತ್ತು.

ಆಗಸ್ಟ್ 18 ರಂದು ನಡೆದ ಸಮಾರಂಭದಲ್ಲಿ "ಚಿಕ್ಕ ವಯಸ್ಸಿನಲ್ಲಿಯೇ ಮಕ್ಕಳು ಪಠ್ಯದ ಜೊತೆಜೊತೆಗೆ ಸ್ಕೌಟ್ಸ್-ಗೈಡ್ಸ್ ನಂತಹ ಸಹಪಠ್ಯ ಚಟುವಟಿಕೆ ಶಿಸ್ತು, ಸಂಯಮ, ದೇಶಾಭಿಮಾನ, ಪರೋಪಕಾರ, ಧೈರ್ಯ, ಸ್ಥೈರ್ಯಗಳನ್ನು ತುಂಬುವಲ್ಲಿ ಸಹಕಾರಿಯಾಗಿದೆ" ಎಂದು ಹಾಸನ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ರಾಮಲಿಂಗರವರು ಅಭಿಪ್ರಾಯಪಟ್ಟರು.

ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿ ಮಾತನಾಡಿ ಮೂರು ದಿನಗಳ ಸದರಿ ಪರೀಕ್ಷಾ ಶಿಬಿರದಲ್ಲಿ ಸ್ಕೌಟಿಂಗ್-ಗೈಡಿಂಗ್‌ನ ಇತಿಹಾಸ, ಪ್ರಾರ್ಥನೆ ಗೀತೆ, ಧ್ವಜಗೀತೆ, ಭಾರತ್ ಸ್ಕೌಟ್ಸ್-ಗೈಡ್ಸ್ ಧ್ವಜ, ವಿಶ್ವ ಸ್ಕೌಟ್-ಗೈಡ್ ಧ್ವಜ ಮುಂತಾದ ವಿಷಯಗಳ ಪರೀಕ್ಷಾ ನಡೆಸಲಾಯಿತು ಎಂದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಮುತ್ತೇಗೌಡ, ಸ್ಕೌಟ್ ವಿಭಾಗದ ನಾಯಕರಾದ ಎಮ್. ಎಸ್. ಪ್ರಕಾಶ್, ಎ.ಎಲ್.ಟಿ.(ಸ್ಕೌ) ಮತ್ತು ಗೈಡ್ ವಿಭಾಗದ ಶ್ರೀಮತಿ ಬಿ. ಕಾಮೇಶ್ವರಿ, ಎ.ಎಲ್.ಟಿ.(ಗೈ.) ಭಾಗವಹಿಸಿದ್ದರು. ಶಿಬಿರದಲ್ಲಿ 100 ಕಬ್ಸ್, ಬುಲ್‌ಬುಲ್ಸ್, 320 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾ ಸಂಘಟಕರಾದ ಶ್ರೀ ಕೊಟ್ರೇಶ್ ಎಸ್. ಉಪ್ಪಾರ್ ಸ್ವಾಗತಿಸಿದರು. ಪುಟ್ಟರಾಜು ನಿರೂಪಿಸಿದರು. ಗೈಡ್ ಕ್ಯಾಪ್ಟನ್ ಪದ್ಮಾ ವಂದಿಸಿದರು.

ಸದ್ಭಾವನೆಯಿಂದ ಮಾತ್ರ ಶಾಂತಿ ನೆಲೆಸಲು ಸಾಧ್ಯ. ಈ ಕಾರಣದಿಂದ ಸರ್ವರು ಸದ್ಭಾವನೆಯನ್ನು ಬೆಳೆಸಿಕೊಳ್ಳಬೇಕಾಗಿದೆ ಎಂದು ಜಿಲ್ಲಾಧಿಕಾರಿ ಶ್ರೀಮತಿ ರೋಹಿಣಿ ಸಿಂಧೂರಿ ಅಭಿಪ್ರಾಯಪಟ್ಟರು. ಅವರು ಆಗಸ್ಟ್ 19 ರಂದು ಜಿಲ್ಲಾಡಳಿತ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾಧಿಕಾರಿ ಕಛೇರಿ ಆವರಣದಲ್ಲಿ ನಡೆದ ಸದ್ಭಾವನಾ ದಿನಾಚರಣೆ ಕಾರ್ಯಕ್ರಮದಲ್ಲಿ ಮಾತನಾಡಿದರು. ಜಿಲ್ಲಾ ಮುಖ್ಯ ಆಯುಕ್ತ ಡಾ. ವೈ.ಎಸ್. ವೀರಭದ್ರಪ್ಪನ, ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಎಚ್.ಎಂ. ಶಿವಣ್ಣ, ಸ್ಕೌಟ್ಸ್ ಆಯುಕ್ತ ಶ್ರೀ ಪ್ರಕಾಶ್ ಎಸ್. ಯಾಜಿ, ಗೈಡ್ಸ್ ಆಯುಕ್ತ ಶ್ರೀಮತಿ ಗಿರಿಜಾಂಬಿಕಾ, ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ, ಸ್ಕೌಟರ್, ಗೈಡರ್ ಸೇರಿದಂತೆ 400 ಕ್ಕೂ ಹೆಚ್ಚು ಕಬ್ಸ್, ಬುಲ್ ಬುಲ್ಸ್, ಸ್ಕೌಟ್ಸ್, ಗೈಡ್ಸ್‌ನ ಮಕ್ಕಳು ಜಾಥಾ ಮೂಲಕ ಸದ್ಭಾವನಾ ದಿನಾಚರಣೆಯಲ್ಲಿ ಪಾಲ್ಗೊಂಡಿದ್ದರು.

"ದೈಹಿಕ ಮತ್ತು ಮಾನಸಿಕವಾಗಿ ಸದೃಢವಾಗಿರಲು ಹಾಗೂ ಬಹುಮುಖಿವಾಗಿ ಮಾನವೀಯ ಮೌಲ್ಯಗಳನ್ನು ವಿದ್ಯಾರ್ಥಿಗಳಲ್ಲಿ ಕಿರುವಯಸ್ಸಿನಿಂದಲೇ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಶ್ಲಾಘನೀಯ ಕೆಲಸ ಮಾಡುತ್ತಿದೆ" ಎಂದು ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರು ಹಾಗೂ ಯೋಗಗುರುಗಳಾದ ಶ್ರೀ ಸುರೇಶ್ ಗುರೂಜಿಯವರು ಅಭಿಪ್ರಾಯಪಟ್ಟರು. ಅವರು ಆಗಸ್ಟ್ 19 ರಂದು ನಗರದ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಕಬ್ಸ್, ಬುಲ ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ಹಮ್ಮಿಕೊಂಡಿದ್ದ ತೃತೀಯ ಸೋಪಾನ ತರಬೇತಿ ಕಾರ್ಯಾಗಾರದಲ್ಲಿ ಯೋಗ ಹಾಗೂ ಪ್ರಾಣಾಯಾಮದ ಕುರಿತು ಉಪನ್ಯಾಸ ಹಾಗೂ ಪ್ರಾತ್ಯಕ್ಷಿಕತೆ ನೀಡಿ ಮಾತನಡಿದರು.

"ನಾವು ನಮಗಾಗಿ ಜೀವಿಸದೇ ಬೇರೆಯವರಿಗಾಗಿ, ಸಮಾಜಕ್ಕಾಗಿ ಬದುಕಬೇಕು. ಅಂದಾಗ ನಮ್ಮ ಜೀವನದ ಸಾರ್ಥಕತೆ ಪಡೆಯುತ್ತದೆ. ಇಂತಹ ಅಮೂಲ್ಯ ಗುಣಗಳನ್ನು, ಸಮಾಜಪರ ಮನೋಧೋರಣೆ ಗಳನ್ನು ಭಾರತ್ ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಹಾಗೂ ವಯಸ್ಕರಲ್ಲಿ ಬೆಳೆಸುತ್ತದೆ" ಎಂದು ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಗಿರಿಜಾಂಬ ಅಭಿಪ್ರಾಯಪಟ್ಟರು. ಆಗಸ್ಟ್ 20 ರಂದು ಶಿಬಿರದ ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿ ಅವರು ಮಾತನಾಡಿದರು.

ಸಂಸ್ಥೆಯ ಕಾರ್ಯದರ್ಶಿ ಶ್ರೀ ಮುತ್ತೇಗೌಡ ಮಾತನಾಡಿ ಮೂರು ದಿನಗಳ ಕಾಲ ತೃತೀಯ ಸೋಪಾನ ತರಬೇತಿ ನೀಡಿದ್ದು ಎಲ್ಲಾ ಮಕ್ಕಳು ಉತ್ತಮವಾಗಿ ಕಲಿಕಾ ಪ್ರಕ್ರಿಯೆಯಲ್ಲಿ ತೊಡಗಿದ್ದಾರೆ. ಮುಂದಿನ ವರ್ಷ ನಡೆಯುವ ನಡೆಯುವ ರಾಜ್ಯ ಪುರಸ್ಕಾರ ಪರೀಕ್ಷೆಗೆ ನೋಂದಣಿಯಾಗಲು ಅರ್ಹರಾಗಿದ್ದಾರೆ. ಈ ದಿಸೆಯಲ್ಲಿ ಮುಂದಿನ ಸಿದ್ಧತೆಯನ್ನು ಸಂಬಂಧಿಸಿದ ಶಿಕ್ಷಕರು ಮಾಡಬೇಕಿದೆ ಎಂದರು. ಜಿಲ್ಲಾ ಸಂಸ್ಥೆಯ ಕೋಶಾಧ್ಯಕ್ಷರಾದ ಶ್ರೀ ಸಿದ್ಧೇಶ್ ಮಾತನಾಡಿ ಸ್ಕೌಟ್-ಗೈಡ್‌ಗಳಿಗೆ ಹಾಗೂ ನಮ್ಮೆಲ್ಲರ ಜೀವನದಲ್ಲಿ ಶಿಸ್ತನ್ನು ಬೆಳೆಸುವುದರ ಜೊತೆಗೆ ಆತ್ಮಸ್ಥೈರ್ಯವನ್ನು ಬೆಳಸುತ್ತದೆ, ಹಾಗೆಯೇ ರಾಷ್ಟ್ರಪ್ರೇಮ, ರಾಷ್ಟ್ರಭಕ್ತಿ, ವೈಶಾಲ್ಯ ಮನೋಭಾವ ಬಳೆಯುತ್ತದೆ ಎಂದರು.

* "ಪ್ರಕೃತಿಯನ್ನು ನಾವು ಪೋಷಿಸಿದರೆ ಅದು ನಮ್ಮನ್ನು ಸದಾ ಪೊರೆಯುತ್ತದೆ. ಇಂದಿನ ಬರಗಾಲದ ಸ್ಥಿತಿಗೆ ನಾವು ಪ್ರಕೃತಿಯನ್ನು ನಾಶಮಾಡಿರುವುದೇ ಪ್ರಮುಖ ಪಾತ್ರವಾಗಿ ಕಾಡುತ್ತಿದೆ" ಎಂದು ಕರ್ನಾಟಕ ರಾಜ್ಯ ರೈತ ಹಿತಸಂರಕ್ಷಣಾ ಸಮಿತಿಯ ರಾಜ್ಯಾಧ್ಯಕ್ಷರಾದ ಶ್ರೀ ಯು.ಸಿ. ಮಹೇಂದ್ರರವರು ಅಭಿಪ್ರಾಯಪಟ್ಟರು. ಅವರು ಹಾಸನ ತಾಲ್ಲೂಕಿನ ದುದ್ದ ಹೋಬಳಿ ಹೊನ್ನಮಾರನಹಳ್ಳಿಯಲ್ಲಿ ದುದ್ದ ಸರಕಾರಿ ಪದವಿಪೂರ್ವ ಕಾಲೇಜಿನ ಪ್ರೌಢಶಾಲಾ ವಿಭಾಗದ ಭಾರತ್ ಸ್ಕೌಟ್ಸ್-ಗೈಡ್ಸ್ ಘಟಕ ಮತ್ತು ಏಕಲವ್ಯ ರೋವರ್ ಮುಕ್ತದಳದಿಂದ ಹಮ್ಮಿಕೊಂಡಿದ್ದ ಸದ್ಭಾವನಾ ದಿನಾಚರಣೆ ಹಾಗೂ ಗಿಡನೆಡುವ ಕಾರ್ಯಕ್ರಮದ ಉದ್ಘಾಟನೆಮಾಡಿ ಮಾತನಾಡಿದರು.

ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಎಂ.ಎಸ್. ಪ್ರಕಾಶ್ ಮಾತನಾಡಿ "ಮಕ್ಕಳಲ್ಲಿ ಚಿಕ್ಕವಯಸ್ಸಿನಿಂದಲೇ ಪ್ರಕೃತಿ ಪ್ರೇಮವನ್ನು ಬೆಳೆಸಬೇಕು. ಈ ಮುಖೇನ ಪರಿಸರ ಜಾಗೃತಿ ಮೂಡಿಸುತ್ತಾ ಮಕ್ಕಳಲ್ಲಿ ಉತ್ತಮ ಸಾಮಾಜಿಕ ಮೌಲ್ಯಗಳನ್ನು ವೃದ್ಧಿಸಲು ಸಹಾಯಕವಾಗುತ್ತದೆ" ಎಂದರು.

ಗೈಡ್ ಕ್ಯಾಪ್ಟನ್ ಶ್ರೀಮತಿ ಬಿ.ಎಸ್. ವನಜಾಕ್ಷಿ ಮಾತನಾಡಿ "ಪರಿಸರ ಕಾಳಜಿ ಹುಟ್ಟಿದ ಪ್ರತಿಯೊಬ್ಬ ಮಾನವನಿಗೂ ಅನಿವಾರ್ಯ ಏಕಂದರೆ ನಾವುಗಳು ಜೀವಿಸಿರುವುದೇ ಈ ಪರಿಸರದಲ್ಲಿ. ಉತ್ತಮ ಪರಿಸರವನ್ನು ಕಾಪಾಡಿಕೊಂಡರೆ ನಮ್ಮ ಆರೋಗ್ಯ ಉತ್ತಮವಾಗಿರುತ್ತದೆ. ಪರಿಸರ ಕೆಡಿಸಿಕೊಂಡರೆ ನಮ್ಮ ಆರೋಗ್ಯವೂ ಹಾಳಾಗುತ್ತದೆ" ಎಂದರು.

ಕಾರ್ಯಕ್ರಮದಲ್ಲಿ ಸುಮಾರು 200 ಕ್ಕೂ ಹೆಚ್ಚು ಗಿಡಗಳನ್ನು ಹೊನ್ನಮ್ಮ ದೇವಾಲಯ ಆವರಣದಲ್ಲಿ ನೆಡಲಾಯಿತು. ಈ ಸಂದರ್ಭದಲ್ಲಿ ಸಂಸ್ಥೆಯ ಜಿಲ್ಲಾ ಜಂಟಿ ಕಾರ್ಯದರ್ಶಿ ಕಾಂಚನಮಾಲ, ಏಕಲವ್ಯ ರೋವರ್ ಮುಕ್ತದಳದ ನಾಯಕ ಶ್ರೀ ಆರ್.ಜಿ. ಗಿರೀಶ್, ಗ್ರಾ.ಪಂ ಸದಸ್ಯೆ ಶುಭಾ, ನಿವೃತ್ತ ಶಿಕ್ಷಕ ಗುಂಡಪ್ಪ, ಶಿಕ್ಷಕಿಯರಾದ ಶ್ರೀಮತಿಯರಾದ ಪೂರ್ಣಿಮಾ, ಉಮಾಪತಿ, ಭೀಮವ್ವ, ಅಸ್ಮಾ, ವಿದ್ಯಾರ್ಥಿಗಳು ಹಾಜರಿದ್ದರು.

## ಹಾವೇರಿ

ಆಗಸ್ಟ್ 15 ರಂದು ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ 71ನೇ ಸ್ವಾತಂತ್ರ್ಯೋತ್ಸವ ದಿನಾಚರಣೆಯ ಕಾರ್ಯಕ್ರಮದ ಪಥಚಲನೆಯಲ್ಲಿ ಹಾವೇರಿ ನಗರದ ಜೆ.ಪಿ. ರೋಟರಿ ಪ್ರೌಢ ಶಾಲೆಯ ಸ್ಕೌಟ್ಸ್ ತಂಡ ಮತ್ತು ಕೆ.ಎಲ್.ಇ. ಪ್ರೌಢಶಾಲೆಯ ಗೈಡ್ಸ್ ತಂಡಗಳು ಭಾಗವಹಿಸಿದ್ದು, ಅದರಲ್ಲಿ ಪ್ರಥಮ ಸ್ಥಾನ ಕೆ.ಎಲ್.ಇ. ಪ್ರೌಢಶಾಲೆಯ ಗೈಡ್ಸ್ ತಂಡಕ್ಕೆ ಮತ್ತು ತೃತೀಯ ಸ್ಥಾನ ಜೆ.ಪಿ. ರೋಟರಿ. ಪ್ರೌಢಶಾಲೆಯ ಸ್ಕೌಟ್ಸ್ ತಂಡಕ್ಕೆ ದೊರಕಿತು. ಶ್ರೀ ರುದ್ರಪ್ಪ ಮಾನಪ್ಪ ಲಮಾಣಿ, ಜಿಲ್ಲಾ ಉಸ್ತುವಾರಿ ಸಚಿವರು ಧ್ವಜಾರೋಹಣ ನೆರವೇರಿಸಿದರು. ಹಾಗೂ ಪಥಚಲನೆಯ ತಂಡಗಳ ವೀಕ್ಷಣೆ ಮಾಡಿದರು. ಪಥಚಲನೆಯಲ್ಲಿ ಪ್ರಥಮ ಸ್ಥಾನ ಮತ್ತು ತೃತೀಯ ಸ್ಥಾನ ಪಡೆದ ತಂಡಗಳಿಗೆ ಡಾ॥ ವೆಂಕಟೇಶ ಎಮ್.ವಿ. ಮಾನ್ಯ ಜಿಲ್ಲಾಧಿಕಾರಿಗಳು. ಶ್ರೀ ಪರಶುರಾಮ ಕೆ., ಪೋಲಿಸ ವರಿಷ್ಠ ಅಧಿಕಾರಿಗಳು ಹಾವೇರಿ ಜಿಲ್ಲೆ ಹಾಗೂ ಶ್ರೀ ಕೆ.ಬಿ. ಆಂಜನಪ್ಪ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ ಹಾವೇರಿ ರವರು ಶೀಲ್ಡ್ ಮತ್ತು ಪ್ರಶಸ್ತಿ ಪತ್ರ ನೀಡಿ ಗೌರವಿಸಿದರು.



## ಕೋಲಾರ

* ಜುಲೈ 15 ಮತ್ತು 16 ರಂದು ಕೋಲಾರ ತಾಲ್ಲೂಕಿನ ಲಕ್ಷ್ಮೀಸಾಗರ ಗ್ರಾಮದ ಗ್ರಾಮ ದೇವತೆಯಾದ ಚಾಮುಂಡೇಶ್ವರಿ ದೇವರ ಜನ್ಮ ದಿನಾಚರಣೆ ಪ್ರಯುಕ್ತ ನಡೆದ ವಿಶೇಷ ಪೂಜೆ ಹಾಗೂ ಲೋಕ ಕಲ್ಯಾಣಕ್ಕಾಗಿ ನೆಡದ ಮಹಾ ಪೂಜೆಯಲ್ಲಿ ಕೋಲಾರ ಜಿಲ್ಲೆಯ ಬಾಲಕರ ಕಾಲೇಜು, ಬಾಲಕರ ಪದವಿ ಪೂರ್ವ ಕಾಲೇಜು, ವೇಮಗಲ್ ಕಾಲೇಜು ಮತ್ತು ಸಾಮ್ರಾಟ್ ಮುಕ್ತ ದಳದ ರೋವರ್ಸ್ ಮತ್ತು ರೇಂಜರ್ಸ್‌ಗಳು ಸ್ವಯಂಸೇವಕರಾಗಿ ಭಾಗವಹಿಸಿದ್ದರು. ಈ ಪೂಜಾ ಕಾರ್ಯಕ್ಕೆ ಆಗಮಿಸಿದ್ದ ಕೋಡಿ ಮಠದ ಸ್ವಾಮೀಜಿಗಳಾದ ಶ್ರೀ ಶ್ರೀ ಶ್ರಿ ಶಿವಾನಂದ ಶಿವಯೋಗಿ ರಾಜೇಂದ್ರ ಮಹಾಸ್ವಾಮಿಗಳು ಮತ್ತು ನಾಗಲಾಪುರ ಮಠದ ಸ್ವಾಮೀಜಿಗಳಾದ ಶ್ರೀ ಶ್ರೀ ಶ್ರಿ ತೇಜೇಶಲಿಂಗ ಸ್ವಾಮಿಜಿಗಳ ಆರ್ಶಿವಾದ ಪಡೆಯಲಾಯಿತು.

* ಜುಲೈ 28 ರಿಂದ 30ರವರೆಗೆ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಗಳಿಗೆ ತೃತೀಯ ಸೋಪಾನ್ ಪರಿಕ್ಷಾ ಶಿಬಿರವನ್ನು ಶ್ರೀನಿವಾಸಪುರ ತಾಲ್ಲೂಕಿನ ಆರಿಕುಂಟೆ ಗ್ರಾಮದ ಸರ್ಕಾರಿ ಪ್ರೌಢ ಶಾಲಾ ಆವರಣದಲ್ಲಿ ನಡೆಸಲಾಯಿತು. ಶಿಬಿರದ ನಾಯಕರಾಗಿ ಶ್ರೀ ನಂಜುಂಡಪ್ಪ, ನಾಯಕಿಯಾಗಿ ಶ್ರೀಮತಿ ಉಮಾದೇವಿ, ಕಾರ್ಯನಿರ್ವಹಿಸಿದರು. ಈ ಶಿಬಿರದಲ್ಲಿ 135ಸ್ಕೌಟ್ಸ್, 85ಗೈಡ್ಸ್‌ಗಳು ಭಾಗವಹಿಸಿದ್ದರು.

* ಆಗಸ್ಟ್ 20ರಂದು ಕೋಲಾರ ನಗರದ ಸರ್ಕಾರಿ ಮಹಿಳಾ ಕಾಲೇಜು ಮತ್ತು ಸರ್ಕಾರಿ ಪ್ರಥಮ ದರ್ಜೆಕಾಲೇಜಿನ ರೋವರ್ಸ್ ಮತ್ತು ರೇಂಜರ್ಸ್‌ಗಳು ತಾಲ್ಲೂಕಿನ ಹರಟಿ ಗ್ರಾಮದಲ್ಲಿ ಸ್ವಚ್ಛಭಾರತ್ ಅಭಿಯಾನದ ಅಂಗವಾಗಿ ಶೌಚಾಲಯಗಳ ಮಹತ್ವದ ಬಗ್ಗೆ ಜನರಿಗೆ ಅರಿವು ಮೂಡಿಸುವ ಕಾರ್ಯಕ್ರಮವನ್ನು ಗ್ರಾಮದ ಮನೆಮನೆಗೆ ಬೇಟಿ ನೀಡಿ ಜಾಗೃತಿ ಮೂಡಿಸಿದರು.



ಆಗಸ್ಟ್ 23ರಂದು ಕೋಲಾರ ನಗರದ ಹೊರವಲಯದ ಅಂತರಗಂಗಾ ದೇವಾಲಯಲದ ಆವರಣದಲ್ಲಿ ಶ್ರೀಕ್ಷೇತ್ರ ಧರ್ಮಸ್ಥಳ ಸೇವಾ ಸಂಘದ ಆಶ್ರಯದಲ್ಲಿ ಸ್ವಚ್ಚತಾ ಅಭಿಯಾನ ಮಾಡಲಾಯಿತು. ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ, ಜಿಲ್ಲಾ ಅಧ್ಯಕ್ಷರಾದ ಶ್ರೀ ಬಿಸಪ್ಪಗೌಡ, ಧರ್ಮಸ್ಥಳ ಸಂಘದ ನಿರ್ದೇಶಕರಾದ ಶ್ರೀ.ಚಂದ್ರಶೇಖರ್, ನಗರಸಭೆ ಸ್ಥಾಯಿ ಸಮಿತಿ ಅಧ್ಯಕ್ಷರಾದ ಶ್ರೀ ಕಾಶಿ ವಿಶ್ವನಾಥ್ ರವರುಗಳುಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಈ ಶಿಬಿರದಲ್ಲಿ 170 ಸ್ಕೌಟ್ಸ್,ಗೈಡ್ಸ್,ರೋವರ್ಸ್ ಮತ್ತು ರೇಂಜರ್ಸ್ ಗಳು ಭಾಗವಹಿಸಿದ್ದರು.

ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಇತರೆ ವಿದ್ಯಾರ್ಥಿಗಳಲ್ಲಿ ದೇಶಭಕ್ತಿಯನ್ನು ಬಿತ್ತುವಲ್ಲಿ ಪ್ರಮುಖ ಪಾತ್ರವಹಿಸಬೇಕಾಗಿದೆ ಎಂದು ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಬಿವೃದ್ಧಿ ಸಂಘದ ಜಿಲ್ಲಾ ನಿರ್ದೇಶಕರಾದ ಚಂದ್ರಶೇಖರ್ ರವರು ಕೋಲಾರ ನಗರದ ಹೊರವಲಯದ ಅಂತರಗಂಗೆಯ ಬೆಟ್ಟದಲ್ಲಿ ಜುಲೈ 24ರಂದು ನಡೆದ ಜಿಲ್ಲಾ ಮಟ್ಟದ ದೇಶಭಕ್ತಿಗೀತೆಗಳ ಗಾಯನ ಸ್ಪರ್ಧೆಯಲ್ಲಿ ವಿಜೇತರಿಗೆ ಬಹುಮಾನ ವಿತರಿಸಿ ಮಾತನಾಡಿದರು.



ಸ್ಕೌಟ್ಸ್ ವಿಭಾಗದಲ್ಲಿ ಪ್ರಥಮ ಸ್ಥಾನವನ್ನು ಕೆ.ಜಿ.ಎಫ್ ನ ಎಕ್ಸಲೆಂಟ್ ಶಾಲೆಯ ಸ್ಕೌಟ್ಸ್ ಗಳು, ದ್ವಿತೀಯ ಸ್ಥಾನವನ್ನು ಕೋಲಾರ ಸುಭಾಷ್ ಶಾಲೆಯ ಸ್ಕೌಟ್ಸ್ ಗಳು, ತೃತೀಯ ಸ್ಥಾನವನ್ನು ಭಗತ್ ಸಿಂಗ್ ಮುಕ್ತ ದಳ, ಗೈಡ್ಸ್ ವಿಭಾಗದಲ್ಲಿ ಕೆ.ಜಿ.ಎಫ್ ನ ಎಕ್ಸಲೆಂಟ್ ಶಾಲೆಯ ಗೈಡ್ಸ್ ಗಳು, ದ್ವಿತೀಯ ಸ್ಥಾನವನ್ನು ಸರೋಜಿನಿ ನಾಯ್ಡು ಮುಕ್ತ ಗೈಡ್ ಕಂಪನಿ, ತೃತೀಯ ಸ್ಥಾನವನ್ನು ರಾಣಿ ಅಬ್ಬಕ್ಕಾ ಮುಕ್ತ ಗೈಡ್ ಕಂಪನಿ, ರೋವರ್ಸ್ ವಿಭಾಗದಲ್ಲಿ ಕೋಲಾರ ಬಾಲಕರ ಕಾಲೇಜಿನ ರೋವರ್ಸ್ ಪ್ರಥಮ ಸ್ಥಾನ, ದ್ವಿತೀಯ ಸ್ಥಾನವನ್ನು ಮಾಲೂರಿನ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್, ತೃತೀಯ ಸ್ಥಾನವನ್ನು ಮುಳಬಾಗಿಲಿನ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್, ರೇಂಜರ್ಸ್ ವಿಭಾಗದಲ್ಲಿ ಪ್ರಥಮ ಸ್ಥಾನವನ್ನು ವೇಮಗಲ್ ಕಾಲೇಜಿನ ರೇಂಜರ್ಸ್, ದ್ವಿತೀಯ ಸ್ಥಾನವನ್ನು ಕೋಲಾರದ ಮಹಿಳಾ ಕಾಲೇಜಿನ ರೇಂಜರ್ಸ್. ತೃತೀಯ ಸ್ಥಾನವನ್ನು ಬಂಗಾರಪೇಟೆ ಕಾಲೇಜಿನ ರೇಂಜರ್ಸ್ ಗಳು ಪಡೆದರು. ಇದೇ ಸಂದರ್ಭದಲ್ಲಿ ಕಳೆದ ವರ್ಷ ನಡೆದ ರಾಷ್ಟ್ರೀಯ ಜಾಂಬೂರಿಯಲ್ಲಿ ಉತ್ತಮ ಸೇವೆ ಸಲ್ಲಿಸಿದ ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ಪದಕ ಮತ್ತು ಪ್ರಮಾಣಪತ್ರವನ್ನು ವಿತರಿಸಲಾಯಿತು. ಈ ಸಮಾರಂಭದಲ್ಲಿ ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ತ್ಯಾಗರಾಜ್, ಜಿಲ್ಲಾ ಆಯುಕ್ತರಾದ ಶ್ರೀ.ಕೆ.ಆರ್.ಸುರೇಶ್, ಶ್ರೀ ಕ್ಷೇತ್ರಧರ್ಮಸ್ಥಳ ಸಂಘದ ಜಿಲ್ಲಾ ಯೋಜನಾಧಿಕಾರಿಯಾದ ಶ್ರೀ ಬಾಬು ಉಪಸ್ಥಿತರಿದ್ದರು. ತೀರ್ಪುಗಾರರಾಗಿ ಶ್ರೀಮತಿ ಬಿ.ಆರ್.ಪಿ ಸವಿತ, ಸ್ಕೌಟ್ಸ್ ಗೈಡ್ಸ್ ಶಿಕ್ಷಕರಾದ ಶ್ರೀ.ಚೇತನ್ ಸಕ್ಪಾಲ್, ಶ್ರೀ.ವಿಶ್ವನಾಥ್, ಶ್ರೀ.ಮಧು, ಶ್ರೀಮತಿ.ಭಾರ್ಗವಿರೆಡ್ಡಿ, ಶ್ರೀ.ಸುಬ್ರಮಣಿ ಮತ್ತು ಶ್ರೀ.ಕುಪೇಂದ್ರಗೌಡ ,ಆಂಜನಪ್ಪ ರವರು ಕೆಲಸ ನಿರ್ವಹಿಸಿದರು.

* ಆಗಸ್ಟ್ 15ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕೋಲಾರ ಜಿಲ್ಲಾ ಸಂಸ್ಥೆಯ ಕಛೇರಿ ಆವರಣದಲ್ಲಿ 71ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಹಮ್ಮಿಕೊಳ್ಳಲಾಯಿತು. ರೋಟರಿ ಅಧ್ಯಕ್ಷರಾದ ಶ್ರೀ ದೇವರಾಜ್ ರವರು ಧ್ವಜಾರೋಹಣ ಮಾಡಿದರು, ಈ ಸಮಾರಂಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಕೆ.ವಿ.ಶಂಕರಪ್ಪ, ಶ್ರೀ ಬಿಸಪ್ಪಗೌಡ, ಶ್ರೀ ಪ್ರಹ್ಲಾದ ರಾವ್, ಶ್ರೀಮತಿ ಜಯಶ್ರೀ, ಶ್ರೀ ಕೆ.ಆರ್. ಸುರೇಶ್, ಶ್ರೀ ಗೋಪಾಲಕೃಷ್ಣರೆಡ್ಡಿ, ಶ್ರೀ ಗೋಪಾಲರೆಡ್ಡಿ, ಶ್ರೀ ವೆಂಕಟರವಣಪ್ಪ, ಶ್ರೀ ಜನಾರ್ಧನ್, ಶ್ರೀ ವಿ. ಬಾಬು, ಶ್ರೀ ಅಪ್ಪಿ ನಾರಾಯಣಸ್ವಾಮಿ ಮತ್ತು ರೋಟರಿ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

* "ದೇಶದ ಪ್ರತಿಯೊಬ್ಬರೂ ತಮ್ಮ ಕರ್ತವ್ಯಗಳನ್ನು ನಿಷ್ಠೆಯಿಂದ ಮಾಡುವುದರೊಂದಿಗೆ ತಮ್ಮ ಸುತ್ತಲಿನ ವದಂತಿಗಳಿಗೆ ಕಿವಿಗೊಡಬಾರದು ಮತ್ತು ವದಂತಿಗಳನ್ನು ಹರಡಲು ಬಿಡಬಾರದು" ಎಂದು ಜಿಲ್ಲಾ ಪಂಚಾಯತ್ ಸದಸ್ಯರಾದ ಸಿ.ಎಸ್.ವೆಂಕಟೇಶ್ ರವರು ಆಲೇರಿ ಗ್ರಾಮದಲ್ಲಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಿಂದ ಆಗಸ್ಟ್ 20ರಂದು ನಡೆದ ರಾಷ್ಟ್ರೀಯ ಸದ್ಭಾವನಾ ದಿನಾಚರಣೆಯ ಪ್ರತಿಜ್ಞಾ ವಿಧಿಯನ್ನು ಬೋಧಿಸಿ ಮಾತನಾಡಿದರು. ಈ ಸಂಧರ್ಭದಲ್ಲಿ ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ವಿ. ಬಾಬು, ಜಿಲ್ಲಾ ಯುವಸಮಿತಿಯ ಅಧ್ಯಕ್ಷರಾದ ಶ್ರೀ ಚೇತನ್ ಸಕ್ಪಾಲ್, ಇತರರು ಭಾಗವಹಿಸಿದ್ದರು.

"ಗಿಡಗಳನ್ನು ತಮ್ಮ ಮಕ್ಕಳಂತೆ ಸಾಕಿ ಪೋಷಿಸಿದಾಗ ಮುಂದಿನ ಭವಿಷ್ಯದಲ್ಲಿ ಮಳೆಬಿದ್ದು ಕೋಲಾರ ಜಿಲ್ಲೆ ಹಸಿರಾಗಿರುತ್ತದೆ, ಇಲ್ಲವಾದಲ್ಲಿ ಬರಡು ಭೂಮಿಯಾಗಿ ಮಾರ್ಪಟ್ಟು ವಾಸಕ್ಕೆ ಕಷ್ಟಕರವಾಗುತ್ತದೆ ಎಂದು ಕೋಲಾರ ತಾಲ್ಲೂಕಿನ ವಿಟ್ಟಪ್ಪನಹಳ್ಳಿ ಗ್ರಾಮದ ಸರ್ಕಾರಿ ಶಾಲಾ ಆವರಣದಲ್ಲಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ, ಗ್ರಾಮ ಪಂಚಾಯತ್ ಹಾಗೂ ಅರಣ್ಯ ಇಲಾಖೆ ವತಿಯಿಂದ ದಿನಾಂಕ 22-08-2017 ರಂದು ನಡೆದ ಗಿಡ ನೆಡುವ ಕಾರ್ಯಕ್ರಮಕ್ಕೆ ಕೋಲಾರ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ರಘನಾಥ ರೆಡ್ಡಿ ರವರು ಚಾಲನೆ ನೀಡಿ ಮಾತನಾಡಿದರು. ಈ ಸಮಾರಂಭದಲ್ಲಿ ಗ್ರಾಮ ಪಂಚಾಯತ್ ಸದಸ್ಯರಾದ ಶ್ರೀ ಸಕೋಟೆ ನಾರಾಯಣಸ್ವಾಮಿ ಶಾಲಾ ಸಮಿತಿಯ ಆಧ್ಯಕ್ಷರಾದ ಶ್ರೀ ರಾಜಪ್ಪ, ಸದಸ್ಯರಾದ ಶ್ರೀ ಚಿಕ್ಕಪ್ಪಯ್ಯ, ಶ್ರೀ ಸುರೇಶ್, ಶ್ರೀ ಹನುಮಪ್ಪ, ಶ್ರೀಮತಿ ನಾಗಮ್ಮ, ಶ್ರೀ ಶ್ರೀನಿವಾಸ್, ಕರ್ನಾಟಕ ರಕ್ಷಣಾ ವೇದಿಕೆ ಜಿಲ್ಲಾ ಅಧ್ಯಕ್ಷರಾದ ರಾಘವೇಂದ್ರ, ಮುಖಂಡರಾದ ಮಂಗಳ ವಿ.ಗೌಡ, ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಪಧಾಧಿಕಾರಿಗಳು ಗ್ರಾಮಸ್ಥರು ಮತ್ತು ಮಕ್ಕಳು ಭಾಗವಹಿಸಿ 236 ಗಿಡಗಳನ್ನು ನಾಟಿ ಮಾಡಲಾಯಿತು.



## ರಾಯಚೂರು

ಜುಲೈ 27 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಭಾರತೀಯ ಕುಟುಂಬ ಯೋಜನೆ ಸಂಘ, ರಾಯಚೂರು ಹಾಗೂ ಪ್ರಥಮ ದರ್ಜೆ ಮಹಾವಿದ್ಯಾಲಯ ರಾಯಚೂರು ಇವರುಗಳ ಸಹಯೋಗದಲ್ಲಿ ಜಿಲ್ಲಾ ಸ್ಕೌಟ್ ಭವನದಲ್ಲಿ ಏರ್ಪಡಿಸಿದ್ದ "ವನ ಮಹೋತ್ಸವ" ಕಾರ್ಯಕ್ರಮವನ್ನು ಡಾ॥ ವಿ.ಎ. ಮಾಲಿ ಪಾಟೀಲ್, ಅಧ್ಯಕ್ಷರು ಭಾರತೀಯ ಕುಟುಂಬ ಯೋಜನಾ ಸಂಘ, ರಾಯಚೂರು ಸಸಿ ನೆಡುವುದರ ಮೂಲಕ ಉದ್ಘಾಟಿಸಿ ಮಾತನಾಡಿದರು. "ನಗರಗಳು ಬೆಳೆದಂತೆ ವಾಯು ಮಾಲಿನ್ಯ ಹೆಚ್ಚಾಗುತ್ತಿದೆ. ವಾಯು ಮಾಲಿನ್ಯದಿಂದಾಗಿ ಪರಿಸರ ನಾಶವಾಗುತ್ತಿದೆ. ಇದಕ್ಕೆ ಕಾರಣ ಮರಗಳನ್ನು ಕಡಿದು ನಗರಗಳನ್ನು ನಿರ್ಮಿಸುತ್ತಿರುವುದು. ಆದ್ದರಿಂದ ನಾವೆಲ್ಲ ಇಂದು ಚಿಂತನೆ ಮಾಡಿ "ಮನೆಗೊಂದು ಮರ, ಊರಿಗೊಂದು ವನ" ಎಂಬ ನಾಣ್ನುಡಿಯನ್ನು ಪಾಲಿಸಿ ಹೆಚ್ಚಿನ ಸಂಖ್ಯೆಯಲ್ಲಿ ಮಗಳನ್ನು ಬೆಳೆಸಿ ಹಸಿರನ್ನು ಕಾಪಾಡೋಣ" ಎಂದು ನುಡಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಶ್ರೀ ಪ್ರಾಣೇಶ ಕುಲಕರ್ಣಿ ಪ್ರಾಂಶುಪಾಲರು. ಸ.ಪ್ರ.ದರ್ಜೆ ವಿಶ್ವವಿದ್ಯಾಲಯ, ರಾಯಚೂರು ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಶ್ರೀ ಹೆಚ್. ಹನುಮಂತಪ್ಪ, ಗೌರವ ಉಪಾಧ್ಯಕ್ಷರು ಭಾ.ಕು.ಯೋ. ಸಂ. ಮತ್ತು ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ಈರಮ್ಮ ಗೌರವ ಉಪಾಧ್ಯಕ್ಷರು ಭಾ.ಕು.ಯೋ. ಸಂಘ, ಶ್ರೀಮತಿ ಕೆ. ಅಲಿಯಾ ಖಾನಂ, ಕಾರ್ಯದರ್ಶಿಗಳು ಎಫ್.ಪಿ.ಎ.ಐ. ಶ್ರೀ ಅಮರೇಗೌಡ ಪಾಟೀಲ್, ಜಿಲ್ಲಾ ಆಯುಕ್ತರು ಡಾ. ಶಿವಯ್ಯ ಹಿರೇಮಠ, ರೋವರ್ ಲೀಡರ್, ಶ್ರೀ ವಾಗೀಶ, ವ್ಯವಸ್ಥಾಪಕರು, ಶ್ರೀ ವಿಶ್ವನಾಥಗೌಡ, ಜಿಲ್ಲಾ ಸಂಘಟಕರು ಹಾಗೂ ವಿವಿದ ಕಾಲೇಜಿನ ರೋವರ್ಸ್‌ಗಳು ಭಾಗವಹಿಸಿ ಸುಮಾರು ನೂರಕ್ಕೂ ಹೆಚ್ಚು ಸಸಿಗಳನ್ನು ಜಿಲ್ಲಾ ಸಂಸ್ಥೆ ಆವರಣದಲ್ಲಿ ನೆಡಲಾಯಿತು. ಶ್ರೀ ವೇಣುಗೋಪಾಲ ಕಾರ್ಯಕ್ರಮ ನಿರೂಪಿಸಿ ವಂದಿಸಿದರು.

* ಆಗಸ್ಟ್ 12 ರಂದು ರಾಯಚೂರು ಜಿಲ್ಲಾ ಸ್ಕೌಟ್ ಭವನದಲ್ಲಿ ಸ್ಕೌಟ್-ಗೈಡ್ಸ್‌ಗಳ ಜಿಲ್ಲಾ ಮಟ್ಟದ ದೇಶಭಕ್ತಿ ಗೀತೆಗಳ "ಗೀತಗಾಯನ" ಕಾಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಶ್ರೀ ಎಲ್.ಬಿ. ಹೊರಪ್ಯಾಟಿ ಜಿಲ್ಲಾ ಸ್ಥಾನಿಕ ಆಯುಕ್ತರು(ಸ್ಕೌ) ಇವರು ವಾದ್ಯ ನುಡಿಸುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಅವರು ಮಾತನಾಡಿ "ಇಂದಿನ ದಿನಮಾನಗಳಲ್ಲಿ ದೇಶಭಕ್ತಿ ಗೀತೆಗಳ ಹಾಡುಗಾರಿಕೆ ಕಡಿಮೆಯಾಗುತ್ತಿದೆ. ಆದ್ದರಿಂದ ಇಂತಹ ಕಾರ್ಯಕ್ರಮಗಳು ಪ್ರತಿ ವರ್ಷ ಸಂಸ್ಥೆಯಿಂದ ಇನ್ನೂ ಹೆಚ್ಚಿನ ರೀತಿಯಲ್ಲಿ ಆಗಬೇಕಾಗಿದೆ. ಆ ನಿಟ್ಟಿನಲ್ಲಿ ರಾಯಚೂರು ಜಿಲ್ಲಾ ಸಂಸ್ಥೆ ದೇಶ ಭಕ್ತಿಗೀತೆಗಳ ಗೀತ ಗಾಯನ ಸ್ಪರ್ಧೆಯನ್ನು ಏರ್ಪಡಿಸಿ ಮಾದರಿಯಾಗಿದೆ" ಎಂದು ಪ್ರಶಂಸೆ ವ್ಯಕ್ತ ಪಡಿಸಿದರು.



ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಶ್ರೀ ಬಸವರಾಜ ಬೋರೆಡ್ಡಿ ಜಿಲ್ಲಾ ಆಯುಕ್ತರು(ಸ್ಕೌ) ಇವರು ಮಾತನಾಡಿದರು. ಸ್ಪರ್ಧೆಯ ತೀರ್ಪುಗಾರರಾಗಿ ಆಗಮಿಸಿದ್ದ ಪಂಡಿತ ಪುಟ್ಟರಾಜ ಗವಾಯಿಗಳ ಶಿಷ್ಯರಾದ ಶ್ರೀ ಸಿದ್ಧರಾಮಯ್ಯ ತೆಕ್ಕಲಕೋಟೆ ಇವರು ಮಾತನಾಡಿ, "ಕಣ್ಣಿಲ್ಲದೆ ಸಾಧನೆ ಮಾಡಿ ಅನೇಕ ಅಂಧ ಮಕ್ಕಳ ಪಾಲಿಗೆ ದೇವರಾಗಿದ್ದಾರೆ. ಪಂಡಿತ ಪುಟ್ಟರಾಜ ಗವಾಯಿಗಳು, ಆದರೆ ನಾವು ಕಣ್ಣಿದ್ದರೂ ಸಾಧನೆ ಮಾಡದೆ ಅಂಧಕಾರದಲ್ಲಿದ್ದೇವೆ, ಅಂಧಕಾರವನ್ನು ಓಡಿಸಿ ಜ್ಞಾನವೆಂಬ ದಿವ್ಯ ಜ್ಯೋತಿಯನ್ನು ಬೆಳಗಿಸೋಣ" ಎಂದರು. ಶ್ರೀ ರಾವುತರಾವ್ ಬರೂರ, ಜಿಲ್ಲಾ ಸಂಘಟನಾ ಆಯುಕ್ತರು(ಸ್ಕೌ) ಇವರು ಪ್ರಾಸ್ತಾವಿಕವಾಗಿ ದೇಶಭಕ್ತಿ ಗೀತೆಗಳ ಸ್ಪರ್ಧೆಗಳ ಕುರಿತು ಮಾತನಾಡಿದರು. ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ಇವರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿ, "ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದ ವೀರರ ಜೀವನ ಚರಿತ್ರೆಯನ್ನು ಓದಿ ತಿಳಿದುಕೊಂಡು ಮೌಲ್ಯಯುತವಾದ ಬದುಕನ್ನು ಕಟ್ಟಿ ದೇಶಕ್ಕೆ ಮಾದರಿಯಾಗೋಣ" ಎಂದರು.



ವಿಜೇತರಾದವರು: ಗೈಡ್ ವಿಭಾಗದಲ್ಲಿ ಮುರಾರ್ಜಿ ದೇಸಾಯಿ ವಸತಿ ಶಾಲೆ, ಜಾಲಹಳ್ಳಿ ತಾಲ್ಲೂಕು ದೇವದುರ್ಗ ಪ್ರಥಮ ಸ್ಥಾನ. ಬಸವಶ್ರೀ ಪ್ರೌಢಶಾಲೆ, ರಾಯಚೂರು ದ್ವಿತೀಯ ಸ್ಥಾನ, ಕಾಕತೀಯ ಶಾಲೆಯ ಮಾನವಿ, ತೃತೀಯ ಸ್ಥಾನ. ಸ್ಕೌಟ್ ವಿಭಾಗದಲ್ಲಿ ಮುರಾರ್ಜಿ ದೇಸಾಯಿ ವಸತಿ ಶಾಲೆ, ಜಾಲಹಳ್ಳಿ ತಾಲ್ಲೂಕು ದೇವದುರ್ಗ ಪ್ರಥಮ ಸ್ಥಾನ. ಸರ್ಕಾರಿ ಪ್ರೌಢ ಶಾಲೆ ಕೆ.ಇ.ಬಿ. ಕಾಲೋನಿ, ರಾಯಚೂರು, ದ್ವಿತೀಯ ಸ್ಥಾನ, ಸರ್ಕಾರಿ ಪ್ರೌಢಶಾಲೆ, ಅಂಬಾಮಠ ತಾಲ್ಲೂಕು ಸಿಂಧನೂರು ಮತ್ತು ವಿದ್ಯಾಭಾರತಿ ಶಾಲೆ, ರಾಯಚೂರು, ತೃತೀಯ ಸ್ಥಾನ.

ಶ್ರೀ ಶ್ರೀನಿವಾಸ ಆಶಾಪುರ ಸಂಗೀತ ಪರಿಣಿತರು ಪುಟ್ಟರಾಜ ಗವಾಯಿ ಸಂಗೀತ ಪಾಠ ಶಾಲೆ, ರಾಯಚೂರು, ಶ್ರೀ ಎಂ. ಸಿದ್ಧರಾಮಯ್ಯ ತೆಕ್ಕಲಕೋಟೆ ತಾಲ್ಲೂಕು ಸಿರುಗುಪ್ಪ ಬಳ್ಳಾರಿ ಜಿಲ್ಲೆ. ಶ್ರೀ ಸಂಗಮೇಶ್ವರಸ್ವಾಮಿ ರಾಯಚೂರು ಇವರು ತೀರ್ಪುಗಾರರಾಗಿ ಕಾರ್ಯನಿರ್ವಹಿಸಿದರು. ಈ ಸಂದರ್ಭದಲ್ಲಿ ಶ್ರೀ ಅರ್ಜುನ್ ರಾವ್, ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು, ಶ್ರೀಮತಿ ಸೀಮಾ ಸಹಾಯಕ ಜಿಲ್ಲಾ ಆಯುಕ್ತರು, ಶ್ರೀಮತಿ ಗೀತಾ ಜಿ. ಜಿಲ್ಲಾ ಹಣಕಾಸು ಸಮಿತಿ ಸದಸ್ಯರು ಕು. ಲಕ್ಷ್ಮೀ ಎ. ಹಾಗೂ ಜಿಲ್ಲೆಯ ವಿವಿಧ ಶಾಲೆಗಳಿಂದ ಆಗಮಿಸಿದ ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್ಸ್ ಹಾಗೂ ಸ್ಕೌಟ್ಸ್-ಗೈಡ್ಸ್ ಉಪಸ್ಥಿತರಿದ್ದರು. ಶ್ರೀಮತಿ ವಿಜಯಲಕ್ಷ್ಮಿ ಜಿಲ್ಲಾ ತರಬೇತಿ ಆಯುಕ್ತರು(ಗೈ) ಇವರು ಸ್ವಾಗತಿಸಿ ನಿರೂಪಿಸಿದರು. ಶ್ರೀ ವಿಶ್ವನಾಥ ಗೌಡ ವಿ.ಎಮ್. ಜಿಲ್ಲಾ ಸಂಘಟಕರು ವಂದಿಸಿದರು.

* ಆಗಸ್ಟ್ 19 ರಂದು ಬಸವಶ್ರೀ ಶಾಲೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಸೂಗೂಣಾ ಶಿಕ್ಷಣ ಸಂಸ್ಥೆಯ ಸಹಯೋಗದಲ್ಲಿ "ರಾಷ್ಟ್ರೀಯ ಸದ್ಭಾವನಾ" ದಿನಾಚರಣೆಯ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಕಾರ್ಯಕ್ರಮ ಉದ್ಘಾಟಿಸಿದ ಶ್ರೀಮತಿ ಲಲಿತಾ ಬಸನಗೌಡ, ಜಿಲ್ಲಾ ಸಹಾಯಕ ಆಯುಕ್ತರು(ಗೈ) ಇವರು ಮಾತನಾಡಿದರು. "ಭಾರತ ದೇಶ ವಿವಿಧತೆಯಲ್ಲಿ ಏಕೆ ಎಂಬುದು ತೋರಿಸಬೇಕಾದರೆ ಎಲ್ಲ ಧರ್ಮ ಹಾಗೂ ಜಾತಿಯ ಜನರು ನಾವೆಲ್ಲರೂ ಭಾರತೀಯರು ಎಂಬುದನ್ನು ತಿಳಿದು ಸೌಹಾರ್ದತೆಯಿಂದ ಬಾಳಬೇಕು" ಎಂದರು.

ಪ್ರಾಸ್ತಾವಿಕವಾಗಿ ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಮಾತನಾಡಿ, "ಇಂದಿನ ಯುವಕರು ದೇಶಾಭಿಮಾನದಿಂದ ರಾಷ್ಟ್ರಾಭಿವೃದ್ಧಿಗಾಗಿ ಸೌಹಾರ್ದತೆಯನ್ನು ಕಾಪಾಡಿಕೊಂಡು ಸಮಾಜದಲ್ಲಿ ಕೋಮು ಸೌಹಾರ್ದತೆಯಿಂದ ಬಾಳಲು ಜಾಗೃತಿ ಅಭಿಯಾನದ ಮೂಲಕ ಜನರಲ್ಲಿ ಅರವು ಮೂಡಿಸುವ ಕೆಲಸವನ್ನು ನಮ್ಮ

ಸ್ಕೌಟ್ಸ್-ಗೈಡ್ಸ್‌ಗಳು ಮಾಡಿ, ಸದೃಢ ರಾಷ್ಟ್ರ ಕಟ್ಟಲು ಮುಂಆಗುವಂತೆ ಕರೆನೀಡಿದರು. ಈ ಸಂದರ್ಭದಲ್ಲಿ ಸದ್ಭಾವನಾ ದಿನಾಚರಣೆಯ ಪ್ರತಿಜ್ಞೆಯನ್ನು ಶ್ರೀಮತಿ ವಿಜಯಲಕ್ಷ್ಮಿ, ಜಿಲ್ಲಾ ತರಬೇತಿ ಆಯುಕ್ತರು(ಗೈ) ಇವರು ಬೋಧಿಸಿದರು. ಈ ಕಾರ್ಯಕ್ರಮದಲ್ಲಿ ಸೂಗೂಣಾ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಶ್ರೀ ಬಸನಗೌಡ ವಕೀಲ, ಸಂಸ್ಥೆಯ ಶಿಕ್ಷಕವೃಂಧದವರು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀಮತಿ ವಿಜಯಲಕ್ಷ್ಮಿ ಇವರು ಸ್ವಾಗತಿಸಿ ವಂದಿಸಿದರು.

## ತುಮಕೂರು

* ಜುಲೈ 7 ರಂದು ತುಮಕೂರು ಜಿಲ್ಲಾ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ವತಿಯಿಂದ ಆಯೋಜಿಸಿದ್ದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ತುಮಕೂರಿನ ಶ್ರೀರಾಮನಗರದ ಡಯಟ್ ಸಭಾಂಗಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಶ್ರೀ ಪ್ರಸನ್ನಕುಮಾರ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಸ್ಕೌಟ್ ಆಯುಕ್ತರಾದ ಶ್ರೀ ವೇಣುಗೋಪಾಲಕೃಷ್ಣ, ಗೈಡ್ ಆಯುಕ್ತರಾದ ಶ್ರೀಮತಿ ಸುಭಾಷಿಣಿ ಹಾಗೂ ರಾಜ್ಯ ಸಂಸ್ಥೆಯ ವೀಕ್ಷಕರಾಗಿ ಆಗಮಿಸಿದ್ದ ಶ್ರೀ ಎಂ.ಕೆ. ಖಾನ್, ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು. ಸಾರ್ವಜನಿಕ ಶಿಕ್ಷಣ ಇಲಾಖೆ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಹಡಗಲಿಯವರು ಸ್ಕೌಟರ್ಸ್-ಗೈಡರ್ಸ್‌ಗಳಿಗೆ ಹಿತವಚನ ನೀಡಿದರು. ಡಯಟ್ ಕಾಲೇಜಿನ ಪ್ರತಿನಿಧಿಯಾಗಿ ಶ್ರೀ ಸುಭಾಷ್ ವಿ. ಭಾರಧ್ವಾಜ್ ಸ್ಕೌಟ್ಸ್-ಗೈಡ್ಸ್ ಮಹತ್ವದ ಬಗ್ಗೆ ತಿಳಿಸಿದರು. ಈ ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಬೆಳ್ಳಿ ಲೋಕೇಶ್ ಮತ್ತು ಪದಾಧಿಕಾರಿಗಳು, 6 ತಾಲ್ಲೂಕುಗಳಿಂದ ಕಾರ್ಯದರ್ಶಿಗಳು ಆಗಮಿಸಿದ್ದರು. ಉಪಾಧ್ಯಕ್ಷರಾದ ಶ್ರೀ ಸುಜ್ಞಾನ ಹಿರೇಮಠ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಶ್ರೀ ಬಿ.ಆರ್. ವೇಣುಗೋಪಾಲಕೃಷ್ಣ ಎಲ್ಲರನ್ನು ಸ್ವಾಗತಿಸಿದರು. ಕಾರ್ಯದರ್ಶಿಗಳು ಎಲ್ಲರಿಗೂ ವಂದಿಸಿದರು. ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಟಿ. ರಮೇಶ್ ಕಾರ್ಯಕ್ರಮ ನಿರೂಪಿಸಿದರು.

## ಉಡುಪಿ

ಕ್ವಿಟ್ ಇಂಡಿಯಾ ಡೇ ಪ್ರಯುಕ್ತ, ಜಿಲ್ಲಾಧಿಕಾರಿ ಹಾಗೂ ಸಹಾಯಕ ನಿರ್ದೇಶಕರು, ಯುವಜನ ಕ್ರೀಡಾ ಇಲಾಖೆ ಉಡುಪಿ ಇವರ ಮಾರ್ಗದರ್ಶನದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ನೇತೃತ್ವದಲ್ಲಿ ಉಡುಪಿ ಜಿಲ್ಲೆಯ ಬಸ್ ನಿಲ್ದಾಣಗಳನ್ನು ಶುಚಿತ್ವ ಮಾಡುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು, ಈ ನೆಲೆಯಲ್ಲಿ ಉಡುಪಿ, ಶಂಕರನಾರಾಯಣ, ಬಿದ್ಕಲ್ಕಟ್ಟೆ, ಬೈಂದೂರು, ಕಾರ್ಕಳ ಮೂಡುಬೆಳ್ಳೆ, ಸಾಸ್ತಾನ, ಶಂಕರಪುರ, ಕುಂದಾಪುರ, ಕೊಲ್ಲೂರು, ಕೋಟೇಶ್ವರ, ಹಿರಿಯಡ್ಕ, ಪೆರ್ಡೂರು, ಪರ್ಕಳ, ಹನುಮಂತನಗರ, ಪೆರಂಪಳ್ಳಿ ಉದ್ಯಾವರ, ಅಜ್ಜರಕಾಡು, ಪುತ್ತೂರು ಹತ್ತಿರದ ಬಸ್ ನಿಲ್ದಾಣಗಳನ್ನು ಸ್ವಚ್ಛತೆ ಮಾಡಲಾಯಿತು. ಸುಮಾರು 3000 ರೋವರ್, ರೇಂಜರ್, ಸ್ಕೌಟ್ಸ್-ಗೈಡ್ಸ್‌ಗಳು 350 ಬಸ್ ನಿಲ್ದಾಣಗಳನ್ನು ಸ್ವಚ್ಛತೆ ಮಾಡಿದರು.

* ಆಗಸ್ಟ್ 14 ರಂದು ಜಿಲ್ಲಾ ಮಟ್ಟದ ಗೀತಗಾಯನ ಸ್ಪರ್ಧೆಯು, ಉಡುಪಿ ಶ್ರೀಕೃಷ್ಣ ಮಠ, ಉಡುಪಿ ಇಲ್ಲಿ ನಡೆಯಿತು. ಪರ್ಯಾಯ ಸ್ವಾಮೀಜಿ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿ ಸ್ಕೌಟ್ಸ್ ಗೈಡ್ಸ್ ಸಂಸ್ಥೆಯು ಮಕ್ಕಳಲ್ಲಿ ದೇಶ ಪ್ರೇಮವನ್ನು ಮೂಡಿಸುವಲ್ಲಿ ಮುಂಚೂಣಿಯಲ್ಲಿದೆ ಎಂದು ಹಾರೈಸಿ ಆಶೀರ್ವದಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಡಾ. ವಿಜಯೇಂದ್ರ ರಾವ್ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಜ್ಯೋತಿ ಪೈ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಐ.ಕೆ. ಜಯಚಂದ್ರ ಹಾಗೂ ಜಿಲ್ಲಾ ಉಪಾಧ್ಯಕ್ಷರಾದ ಶ್ರೀಮತಿ ಜ್ಯೋತಿ ಕೆ. ಹೆಬ್ಬಾರ್ ಅವರು ಭಾಗವಹಿಸಿದ್ದರು. ಸಮಾರೋಪ ಸಮಾರಂಭದಲ್ಲಿ ಕಿರಿಯ ಸ್ವಾಮೀಜಿಗಳು ಮಕ್ಕಳಿಗೆ ಬಹುಮಾನ ನೀಡಿದರು.



# ಶ್ರದ್ಧಾಂಜಲಿ







## ಬಿ.ಕೆ. ಪಾಟೀಲ್, ಎಲ್.ಟಿ.(ಸ್ಕೌಟ್ಸ್)

### ಜಿಲ್ಲಾ ತರಬೇತಿ ಆಯುಕ್ತರು, (ಸ್ಕೌಟ್ಸ್), ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಧಾರವಾಡ ಜಿಲ್ಲೆ ಸ್ಕೌಟ್ ವಿಭಾಗದ ರಾಜ್ಯ ತರಬೇತಿ ನಾಯಕರು, ಬೆಂಗಳೂರು

**ಶ್ರೀ ಬಿ.ಕೆ. ಪಾಟೀಲರು,** ಸ್ಕೌಟ್ ಮಾಸ್ಟರ್ ಆಗಿ, ಪ್ರಾಥಮಿಕ ಶಾಲಾ ನಿವೃತ್ತ ಮುಖ್ಯಾಧ್ಯಾಪಕರಾಗಿ, ಧಾರವಾಡ ಜಿಲ್ಲಾ ಸ್ಕೌಟ್ ತರಬೇತಿ ಆಯುಕ್ತರಾಗಿದ್ದ ದಿನಾಂಕ ಆಗಸ್ಟ್ 11 ರಂದು ಬೆಳಿಗ್ಗೆ ತಮ್ಮ 75ನೇ ವಯಸ್ಸಿನಲ್ಲಿ ಹುಬ್ಬಳ್ಳಿಯಲ್ಲಿ ನಿಧನರಾದರೆಂದು ತಿಳಿಸಲು ಅತೀವ ದುಃಖವೆನಿಸುತ್ತದೆ.

ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ರೊಟ್ಟಿಗವಾಡ ಗ್ರಾಮದಲ್ಲಿ ಪ್ರಸಿದ್ಧ ರೈತ ಕುಂಟುಂಬದ ಪಾಟೀಲ (ಗೌಡ್ರ) ಮನೆತನದಲ್ಲಿ ಜನಿಸಿದ ಇವರು ಶಾಲೆಯಲ್ಲಿ ಸ್ಕೌಟ್ ಸೇರಿದಾಗಿನಿಂದ ಹೆಚ್ಚಿನ ಆಸಕ್ತಿಯಿಂದ ಪ್ರಗತಿಯಲ್ಲಿ ಸಾಗುತ್ತಾ ವಯಸ್ಕ ನಾಯಕರ ಅತಿಹೆಚ್ಚಿನ ತರಬೇತಿಯಾದ ಲೀಡರ್ ಟ್ರೈನರ್ (ಸ್ಕೌಟ್ಸ್) ಹಂತದವರೆಗೆ ತಲುಪುವುದರಲ್ಲಿ ಯಶಸ್ವಿಯಾದರು. ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ನಡೆದ ಸ್ಕೌಟ್-ಮಾಸ್ಟರ್ ತರಬೇತಿ ಶಿಬಿರಗಳಲ್ಲಿ ನಾಯಕರಾಗಿ ಸೇವೆ ಸಲ್ಲಿಸಿದರು. ಧಾರವಾಡ ಜಿಲ್ಲಾ ಸಂಸ್ಥೆಯಲ್ಲಿ ಸ್ಕೌಟ್ ತರಬೇತಿ ಆಯುಕ್ತರಾಗಿ ಅನೇಕ ವರ್ಷಗಳ ವರೆಗೆ ಸೇವೆ ಸಲ್ಲಿಸಿದರು. ರಾಜ್ಯ ತರಬೇತಿ ತಂಡದ ಸದಸ್ಯರಾದ ಇವರು ಕೊಂಡಜ್ಜಿ ಶಿಬಿರದ ಅಭಿವೃದ್ಧಿ ಸಮಿತಿ ಸದಸ್ಯರಾಗಿಯೂ ಸೇವೆ ಸಲ್ಲಿಸಿದರು. ರಾಜ್ಯದ ವಿವಿಧ ಕಡೆಗಳಲ್ಲಿ ವಿವಿಧ ಪ್ರಕಾರದ ಗಂಟುಗಳನ್ನು ಸ್ಕೌಟ್-ಗೈಡ್‌ಗಳಿಗೆ ಹಾಗೂ ಶಿಕ್ಷಕರಿಗೂಕಲಿಸುತ್ತಾ **"ಗಂಟುಗಳ ರಾಜನೆಂದು"** ಹೆಸರು ಪಡೆದರು. ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಧ್ಯೇಯ ವಾಕ್ಯ **"ಸದಾ ಸಿದ್ಧನಿರು"** ಇದನ್ನು ತಪ್ಪದೆ ತಮ್ಮ ಜೀವನದಲ್ಲಿ ಪಾಲಿಸಿದರು. ರಾಜ್ಯ ಸಂಸ್ಥೆಯಿಂದ ಯಾವುದೇಕರೆ ಬಂದರೂ ಎಂದೂ ನಿರಾಕರಿಸದೆ ಆಯಾ ಚಟುವಟಿಕೆಗಳಿಗೆ ಹಾಜರಾಗುತ್ತಿದ್ದರು.

ಇವರು ತಮ್ಮ ದುಃಖತಪ್ತ ಪತ್ನಿ, ಇಬ್ಬರು ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು, ಮೊಮ್ಮಕ್ಕಳು ಅಪಾರ ಬಂಧು ಬಳಗ ಹಾಗೂ ಸ್ನೇಹಿತರನ್ನು ಅಗಲಿದ್ದಾರೆ.

**ಇವರ ಆತ್ಮಕ್ಕೆ ಭಗವಂತನು ಶಾಂತಿ ದಯಪಾಲಿಸಲೆಂದು ಹಾಗೂ ಇವರ ಕುಟುಂಬಕ್ಕೆ ದುಃಖಭರಿಸುವ ಶಕ್ತಿಯನ್ನು ದಯಪಾಲಿಸಲೆಂದು ಕರ್ನಾಟಕ ರಾಜ್ಯ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಸರ್ವಸದಸ್ಯರು, ತರಬೇತಿ ನಾಯಕರು, ಸ್ಕೌಟ್ ಮಾಸ್ಟರರು, ಗೈಡ್ ಕ್ಯಾಪ್ಟನ್ನರು ಹಾಗೂ ಅವರ ಎಲ್ಲ ಅಭಿಮಾನಿಗಳು ಪ್ರಾರ್ಥಿಸುತ್ತೇವೆ.**

**– ರಾಜ್ಯ ಕಾರ್ಯದರ್ಶಿ**







ಆಗಸ್ಟ್ 15ರಂದು ಉಡುಪಿ ಜಿಲ್ಲಾ ಕ್ರೀಡಾಂಗಣದಲ್ಲಿ ಜರುಗಿದ ಸ್ವಾತಂತ್ರ್ಯೋತ್ಸ ದಿನಾಚರಣೆ ಪಥಚಲನದಲ್ಲಿ ಭಾಗವಹಿಸಿ ಬಹುಮಾನ ಪಡೆದ ಸ್ಕೌಟ್-ಗೈಡ್‌ಗಳಿಗೆ ಮಾನ್ಯ ಬಂದರು ಮತ್ತು ಮೀನುಗಾರಿಕೆ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಪ್ರಮೋದ್ ಮದ್ವರಾಜ್ ಅವರು ಪಾರಿತೋಷಕ ಹಾಗೂ ಪ್ರಶಸ್ತಿ ಪತ್ರವನ್ನು ನೀಡಿ ಗೌರವಿಸಿದರು.



ಆಗಸ್ಟ್ 15ರಂದು ಗದಗ್ ಜಿಲ್ಲಾ ಕ್ರೀಡಾಂಗಣದಲ್ಲಿ ಜರುಗಿದ ಸ್ವಾತಂತ್ರ್ಯೋತ್ಸ ದಿನಾಚರಣೆ ಪಥಚಲನದಲ್ಲಿ ದ್ವಿತೀಯ ಸ್ಥಾನ ಪಡೆದ ಗೈಡ್ ತಂಡಕ್ಕೆ ಶ್ರೀ ಹೆಚ್.ಕೆ. ಪಾಟೀಲ್, ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರು ಪಾರಿತೋಷಕವನ್ನು ನೀಡಿ ಗೌರವಿಸಿದರು.



ಆಗಸ್ಟ್ 8ರಂದು ಚಿತ್ರದುರ್ಗದಲ್ಲಿ ಜರುಗಿದ ಜಿಲ್ಲಾ ಪರಿಷತ್ ಸಭೆಯ ಸಂದರ್ಭದಲ್ಲಿ ಶ್ರೀ ಎಂ.ಆರ್. ನಾರಾಯಣಪ್ಪ, ಮಾಜಿ ಜಿಲ್ಲಾ ಆಯುಕ್ತರು ಹಾಗೂ ಹಿರಿಯ ಪತ್ರಕರ್ತರಾದ ಶ್ರೀ ಜಿ.ಎಸ್. ಉಜ್ಜಿನಪ್ಪ ಇವರುಗಳನ್ನು ಜಿಲ್ಲಾ ಸಂಸ್ಥೆಯ ವತಿಯಿಂದ ಸನ್ಮಾನಿಸಲಾಯಿತು. ಜಿಲ್ಲಾ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಆಗಸ್ಟ್ 12ರಂದು ಚಿಕ್ಕಮಗಳೂರು ಜಿಲ್ಲಾ ಸಂಸ್ಥೆಯಲ್ಲಿ ನಡೆದ ಜಿಲ್ಲಾ ಮಟ್ಟದ ದೇಶಭಕ್ತಿಗೀತೆ ಗಾಯನ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಪಡೆದ ಗೈಡ್ ವಿಭಾಗಕ್ಕೆ ಪ್ರಶಸ್ತಿಯನ್ನು ನೀಡಲಾಯಿತು. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎನ್. ಷಡಕ್ಷರಿ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎ.ಎನ್. ಮಹೇಶ್, ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ಸಂಧ್ಯಾರಾಣಿ ಹಾಗೂ ಗೈಡ್ಸ್‌ಗಳನ್ನು ಕಾಣಬಹುದು.



ಜುಲೈ 16ರಿಂದ 21ರ ವರೆಗೆ ಡಾ. ಅನಿಬೆಸೆಂಟ್ ರಾಜ್ಯ ತರಬೇತಿ ಕೇಂದ್ರದಲ್ಲಿ ಚಿಕ್ಕಬಳ್ಳಾಪುರ ಜಿಲ್ಲಾಸಂಸ್ಥೆ ಏರ್ಪಡಿಸಿದ್ದ ಸ್ಕೌಟ್ ಮಾಸ್ಟರ್ಸ್ ಹಾಗೂ ಗೈಡ್ ಕ್ಯಾಪ್ಟನ್ಸ್ ಮೂಲ ತರಬೇತಿ ಶಿಬಿರದಲ್ಲಿ ಭಾಗವಹಿಸಿರುವ ಶಿಬಿರಾರ್ಥಿಗಳು ಹಾಗೂ ಸಿಬ್ಬಂಧಿ ವರ್ಗ

Regd. as News Paper (Magazine) RNI No: 13348/1959. Postal Regd. No. KA/BGGPO/2580/2015-17
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on 28 or 30 every Month (No. of Pages: 32)

# ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ಜರುಗಿದ 'ಸ್ವಚ್ಛಭಾರತ' ಕಾರ್ಯಕ್ರಮಗಳು



ಹಾಸನ




ಉಡುಪಿ



ಕೋಲಾರ



ದಾವಣಗೆರೆ




ದಕ್ಷಿಣ ಕನ್ನಡ




ಗದಗ



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26